# ಅರಿಕೆ

**" ಮಾತಿನ ಮಲ್ಲಿ "** — ಇದು ಒಂದು ಶೃಂಗಾರದ ಕಥೆ.

ನಮ್ಮಲ್ಲಿ ಸಾಮಾನ್ಯವಾಗಿ ಶೃಂಗಾರವೆಂದರೆ ಸ್ತ್ರೀಯ ಅಂಗಾಂಗಗಳ ವರ್ಣನೆ, ವಿರಹದ ವರ್ಣನೆ, ರತಿಕೂಟದ ವರ್ಣನೆ ಎಂದಷ್ಟೇ ಭಾವನೆಯಿದ್ದಂತೆ ಅನಿಸಿಬಿಡುತ್ತದೆ ನಮ್ಮ ಕವಿಗಳ ಕೃತಿಕನ್ನಡಿಗಳನ್ನು ನೋಡಿದರೆ. ಆದರೆ ಇದಕ್ಕೆ ಅಪವಾದವಾಗಿ, ಸ್ತ್ರೀಪುರುಷರ ಸಹಯೋಗ ಜೀವನದ ಪೂರ್ವೋತ್ತರ ಮುಖಗಳನ್ನು ಸವಿ ತಟ್ಟುವಂತೆ ಎಗ್ಗುಸಿಗ್ಗು ಪಡದೆ ವಿವರಿಸಿ ವರ್ಣಿಸಿರುವ ಕೆಲವರೂ ವಿರಳವಾಗಿ ಉಂಟು. ಅಂಥ ವಿರಳರಲ್ಲಿ ಒಬ್ಬ—ನಮ್ಮ ಕನ್ನಡದ ಕವಿ **' ರತ್ನಾಕರ.'**

ರತ್ನಾಕರ ಸುಮಾರು ಐದಾರು ಶತಮಾನಗಳ ಹಿಂದೆ ಇದ್ದವನು. ತಾನು ಬರೆದ **' ಭರತೇಶ ವೈಭವ '** ವೆಂಬ ಕಾವ್ಯದಲ್ಲಿ ಕೃತಯುಗದ ಒಬ್ಬ ಪೌರಾಣಿಕ ಚಕ್ರವರ್ತಿಯ ಕತೆಯನ್ನೇ ಹೇಳುತ್ತಿದ್ದರೂ, ಆ ಅಚ್ಚಿನಲ್ಲಿಯೇ ತನ್ನ ಕಾಲದ ಯಾವುದೋ ರಾಜಾಂತಃಪುರದ ಚಿತ್ರಕಥೆಯನ್ನೂ ಎರಕ ಸೇರಿಸುತ್ತಾ ಹೋಗಿದ್ದಾನೆ. ಅಲ್ಲದೆ, ಸದಾಕಾಲಕ್ಕೂ ನಂದು ಸಂತೋಷ ಕೊಡತಕ್ಕಂಥ (ವೈಯಿನದಂತೂ ಹೇಗೂ ಸರಿಯಲ್ಲ) ಮಾತಿನ, ಮನಸ್ಸಿನ ಸರಸಶೃಂಗಾರವನ್ನು ಹೊಸದಾಗಿ ನಡೆದಾಡಿಸಿದ್ದಾನೆ. ಮಾತ್ರವಲ್ಲ, ಭೋಗ ಶೃಂಗಾರದ ಜೊತೆಜೊತೆಗೇ ಯೋಗಶೃಂಗಾರವನ್ನೂ ನಡೆದಾಡಿಸಿದ್ದಾನೆ.

ಈ ಕವಿಯ ಈ ಕೃತಿಯ ನಾಯಕನಾದ ಭರತ ನಮ್ಮ ಪುರಾಣಗಳ ಕೃಷ್ಣ ಇದ್ದ ಹಾಗೆ. ಕೃಷ್ಣನ ಶೃಂಗಾರಲೀಲೆ ನಮ್ಮವರಿಗೆ ಹೇಗೆ ಪ್ರಿಯವೋ ಹಾಗೆಯೇ ಈ ಭರತೇಶ್ವರನ ಮಾತಿನ ಮಲ್ಲಿಯರೂ ನಮಗೆ ಪ್ರಿಯರಾಗಲಿ.

**—ಜಿ. ಪಿ. ರಾಜರತ್ನಂ**

# ಒಳಪಿಡಿ

ಪುಟ

# ಮಾತಿನ ಮಲ್ಲಿ

---

## ಭಾಗ ಒಂದು: ಬೆಳಗಿನ ಓಲಗ

### ೧

"ಜೋಕೆ! ನೋಡಿ ಬಾ ತಂಗಿ!"

"ಎಚ್ಚರಿಕೆ! ಅಕ್ಕಾಜಿ!"

"ಕೈ ನೀಡಕ್ಕ!"

"ಹೋ, ಹಿಡಿ ತಾಯಿ!"

"ಓಡಬೇಡ, ಅಕ್ಕಾ!"

"ಬಾ, ಬಾ, ತಂಗಿ!"

ಅಯೋಧ್ಯೆಯ ಅರಸನಾದ ಭರತೇಶ್ವರನ ಅಂತಃಪುರದ ಕಾಂತೆಯರು ತಮ್ಮ ಪ್ರಾಣನಾಥನ ಓಲಗಕ್ಕೆ ಹೋಗುತ್ತಿದ್ದಾರೆ. ಓಲಗ ನಡೆಯುವುದು ಮೇರುವಿನ ಹಾಗಿರುವ ಮಹಾಸೌಧದ ಮೇಲುಪ್ಪರಿಗೆಯಲ್ಲಿ.

ಕನ್ನಾಜಿ ಕಮಲಾಜಿ ವಿಮಲಾಜಿ ಸುಮನಾಜಿ ಹೊನ್ನಾಜಿ ಮಘರಾಜಿ ರನ್ನಾಜಿ ಚೆನ್ನಾಜಿ ಚಿನ್ನಾಜಿ ಕಾಂತಾಜಿ ಮುಕುರಾಜಿ ಕುಸುಮಗಂಧಾಜಿ ವಸಂತಾಜಿ ಮಧುಮಾಧವಾಜಿ ಅಂತರಂಗಾಜಿ ಸುಖಾಜಿ ಸುಖಾವತಿ ಶಾಂತಾಜಿ – ಎಲ್ಲರೂ ಹೊರಟಿದ್ದಾರೆ.

ಭೃಂಗಲೋಚನೆ ನೀಲಲೋಚನೆ ಕುರಂಗಲೋಚನೆ ಪುಷ್ಪಮಾಲೆ ಶೃಂಗಾರವತಿ ಗುಣವತಿ ಚಂದ್ರಮತಿ ನಾರಂಗಲೋಚನೆ – ಇವರೂ ಜೊತೆಗೆ ಬಂದಿದ್ದಾರೆ.

ವೀಣಾದೇವಿ ವಿದ್ಯಾದೇವಿ ಸುರದೇವಿ ವಾಣೀದೇವಿ ಶ್ರೀದೇವಿ ಬಾಣಾದೇವಿ ಭದ್ರಾದೇವಿ ಕಲ್ಯಾಣೀದೇವಿ ಅಂಜನಾದೇವಿ ಕುಂಕುಮದೇವಿ ಮಲ್ಲಿಕಾದೇವಿ ಸುದೇವಿ ಉತ್ಸಾಹಾದೇವಿ – ಇವರೂ ಸಂಗಡ ನೇರಿದ್ದಾರೆ.

ಚಿತ್ರವತಿ ಚಿತ್ರಲೇಖೆ ಪದ್ಮಾವತಿ ನೇತ್ರಾವತಿ ಚಂದ್ರಲೇಖೆ ಮಿತ್ರಾವತಿ ಪದ್ಮಲತೆ ಲಲಿತಾಂಗಿ ವಿಚಿತ್ರಾಂಗಿ – ಇವರೂ ಅವರ ಕೂಡೆ ಹೋಗುತ್ತಿದ್ದಾರೆ.

ಕನಕಲತೆ ಕುಂದಲತೆ ಕನಕಮಾಲೆ ಜಿನಮತಿ ಸಿದ್ಧಮತಿ ರತ್ನಮಾಲೆ ಮಣಿಮಾಲೆ ಕಾಂತಿಮಾಲೆ – ಇವರೂ ಉಪ್ಪರಿಗೆಗೆ ಏರುತ್ತಿದ್ದಾರೆ.

ಎಲ್ಲರೂ ಸರಸವಾಡುತ್ತ ಹತ್ತುತ್ತಿದ್ದಾರೆ.

"ಓಡು, ಓಡು. ಅರಸ ನಿನಗೇ ಮೊದಲು ಕೊಡುತ್ತಾನೆ – ದೊಡ್ಡ ಸನ್ಮಾನವನ್ನ."

"ಬಿಡಿ ಬಿಡಿ. ಬರಲಾರದವರು ನೀವು – ಆಡುವುದಕ್ಕೇನು !"

"ನಡೆ, ನಡೆ. ಅವಳ ಮಾತಿಗೇನು !"

"ಇದೇನೆ? ತವಕದಿಂದ 'ನಡೆನಡೆ' ಎನ್ನುತ್ತಿದ್ದಾಳೆ! ಪತಿಯನ್ನು ಎಷ್ಟು ದಿವಸದಿಂದ ಕಂಡಿಲ್ಲವೋ ಈಕೆ!"

"ನಿಮಗೆ ಹಿತ ಹೇಳಿದ್ದು ನನ್ನ ತಪ್ಪು. ಮೌನವಾಗಿ ಬರುತ್ತೇನೆ, ಹೋಗಿ."

"ಯೌವನದ ಸೊಕ್ಕು! ಬರಬರನೆ ಮೆಟ್ಟಲು ಏರುವುದು ನೋಡೆ!"

"ಚಕ್ರವರ್ತಿಯನ್ನೇ ಅಪ್ಪಾಲೆ ತಿಪ್ಪಾಲೆ ಆಡಿಸುವವರು – ನಿಮಗೆ ಮಾತು ಆಡುವುದಕ್ಕೇನು !"

"ಪಾಪ! ಎದೆಯಲ್ಲಿ ದೊಡ್ಡ ಹೊರೆ! ಬರಲಾರಳು ಕಣೆ. ಕೈಹಿಡಿದು ಹತ್ತಿಸಿರೆ!"

"ಚಕ್ರವರ್ತಿಗೆ ಕಿಂಚಿತ್ತೂ ಕರುಣೆಯಿಲ್ಲ. ಉಪ್ಪರಿಗೆಯಲ್ಲಿ ಓಲಗ ನಡಸಬಹುದೆ!"

"ಸಾಕು, ನಿಮ್ಮ ಉಪಚಾರ. ಹೆಡತಲೆಗೆ ಒಂದು ಹೊರೆ, ನಡುವಿನ ಕೆಳಗೆರಡು, ಎದೆಯಲ್ಲಿ ಮತ್ತೆರಡು. ಐದು ಹೊರೆ ಹೊತ್ತವರು ನನ್ನ ಹಂಗಿಸುತ್ತಾರೆ!"

"ಏನಮ್ಮ, ಬೇಗ ಹೋದರೆ ಹಾಗೆನ್ನುತ್ತೀರಿ. ನಿದಾನ ನಡೆದರೆ ಹೀಗೆನ್ನುತ್ತೀರಿ. ನಿಮ್ಮ ಹತ್ತಿರ ಏಗುವುದು ಕಷ್ಟ!"

" ಇದೇನೆ, ಇವಳಿಗೆ ಇಷ್ಟು ಮೌನ? ಗಂಡನ ಹಾಗೆಯೇ ಆತ್ಮ ವನ್ನು ಧ್ಯಾನಿಸುವಳೋ ಹೇಗೊ! ನಿನಗೆ ಈ ಧ್ಯಾನದ ರಹಸ್ಯ ಹೇಳಿ ಕೊಟ್ಟವರು ಯಾರೆ?"

" ಆ ರಹಸ್ಯವನ್ನ ನಿನಗೆ, ನಿನ್ನ ಅರಸನಿಗೆ ಬಿಟ್ಟಿದ್ದೇನಕ್ಕಾ. ನಿಮ್ಮ ಸರಸನಲ್ಲಾ ಪಕ್ಕೆ ಮನಸ್ಸಿನಲ್ಲೇ ಸಂತೋಷಪಟ್ಟು ಬರುತ್ತಿದ್ದೆ.

ಅಷ್ಟು ಹೊತ್ತಿಗೆ ಸಭೆಯ ಮಂಟಪ ಹತ್ತಿರವಾಯಿತು.

" ವಿನೋದ ಸಾಕು. ಸುಮ್ಮನೆ ಬನ್ನಿ. ಸೆರಗು ಸವರಿಸಿಕೊಳ್ಳಿ. ಕುರುಳು ತಿದ್ದಿಕೊಳ್ಳಿ. ಅರಸನ ಸಮ್ಮುಖ ಬಂತು" ಎಂದು ಅವರವರೆ ಪರಸ್ಪರ ಜ್ಞೋಕೆಗುಟ್ಟಿದರು. ಒಬ್ಬರ ಅಲಂಕಾರ ಒಬ್ಬರು ನೋಡಿ ತಿದ್ದಿದರು.

ಸವತಿಯ ಕಾಲಮೇಲೆ ಒಂದು ಕಪ್ಪುಗುರುತು ಇದ್ದುದನ್ನು ಒಬ್ಬಳು ಕಂಡಳು. ಕೂಡಲೆ ಕೈಮುಟ್ಟಿ ಅದನ್ನು ತೊಡೆದಳು.

ಆ ಅಕ್ಕ ಬೆಚ್ಚಿ " ಹಾಹಾ! 'ಕಾಲಮೇಲೆ ಕಪ್ಪು ಇದೆ. ತೊಡೆದುಕೊ' ಎಂದು ಹೇಳದೆ ಮುಟ್ಟಿತೊಡೆಯಬೇಕೆ, ತಂಗಿ!" ಎಂದಳು.

ಅದಕ್ಕೆ ಆ ತಂಗಿ " ಸಭೆ ಸಮೀಪವಾಯಿತು. ಸುಮ್ಮನೆ ಬಾ, ಅಕ್ಕ" ಎಂದು ಅವಳ ಬಾಯಿ ಮುಚ್ಚಿದಳು.

ಹೀಗೆ ವಿನೋದದಿಂದ ಒಬ್ಬರನ್ನೊಬ್ಬರು ನಡಸಿಕೊಂಡು ಓಲಗ ಸಾಲೆಗೆ ಆ ಅರಸಿಯರು ಏರಿಬರುತ್ತಿದ್ದರು.

೨

ಅರಸಿಯರು ಆನಂದದಿಂದ ಮಾಡವನ್ನು ಏರಿ ಬರುತ್ತಿರುವರೆಂಬ ವಾರ್ತೆಯನ್ನು ಅವರ ಕಾಲಂದುಗೆಯ ಕಟಿಸೂತ್ರಗಳ ಧ್ವನಿ ಓಡಿಬಂದು ಅರಸನಿಗೆ ಹೇಳಿದುವು.

ಮೆಲ್ಲಗೆ ಮೆಟ್ಟಲು ಹತ್ತಿ, ಓಲಗವನ್ನು ಹೊಕ್ಕು, ಆರಸಿಯರು ಎದು ರಲ್ಲಿ ಪ್ರಿಯನನ್ನು ಕಂಡರು. ಒಬ್ಬೊಬ್ಬರಾಗಿ ಮುಂದೆ ಬಂದು, ಹತ್ತಿರ ನಿಂತು, ಕಾಣಿಕೆಯೊಪ್ಪಿಸಿದರು. ಸಂಕೋಚದಿಂದ ಮೆಲ್ಲನೆ ಅರಸನ

ಬಳಿಸಾರಿ, ಕೋಮಲವಾದ ತಮ್ಮ ತೋಳನ್ನು ನೀಡಿ, ಕಾಣಿಕೆಕೊಟ್ಟು ಕೈಮುಗಿದು, ಒಳಗೆ ಬಂದು ಸಾಲಾಗಿ ನಿಂತರು.

ಹೊಂಬಣ್ಣದ ಪ್ರೌಯುವತಿಯೊಬ್ಬಳು ಕಾಣಿಕೆಗೆ ಹೊಸ ನಿಂಬೆಯ ಹಣ್ಣು ತಂದುಕೊಟ್ಟು, ತಾಂಬೂಲದಿಂದ ಕೆಂಪಾದ ಹಲ್ಲನ್ನು ಮಿನುಗಿಸುತ್ತ, ಹೊನ್ನಿನ ಬೊಂಬೆಯಂತೆ ಅರಸನ ಒತ್ತಿನಲ್ಲಿ ನಿಂತಳು.

ನೀಲಾಂಗಿಯೊಬ್ಬಳು ಒಂದು ನೀಲಾಂಬುಜದ ಕಾಣಿಕೆಯನ್ನು ತಂದು ಕೊಟ್ಟು, ಕೈಮುಗಿದು, ಇಂದ್ರನೀಲದ ಪುತ್ಥಳಿಯಂತೆ ಅರಸನ ಕೆಲವಲ್ಲಿ ನಿಂತಳು.

ರಾಣಿಯೊಬ್ಬಳು ಬಂದು, ಹೊಂದಾವರೆಯ ಕೈಕಾಣಿಕೆಯಿತ್ತು, ಕೈಮುಗಿದು, ಮಾಣಿಕ್ಯದ ಬೊಂಬೆಯಂತೆ ಅರಸನ ಎಡದ ಕಡೆ ನಿಂತಳು.

ಕೆಂಪಿಯೊಬ್ಬಳು ಬಂದು, ರಾಜನ ಹಸ್ತಕ್ಕೆ ಸಂಪಗೆ ಹೂಗಳನ್ನು ನೀಡಿ, ಸಂಭ್ರಮದಿಂದ ಕೈಮುಗಿದು, ಮಿಕ್ಕ ಸ್ತ್ರೀಯರ ಗುಂಪಿನಲ್ಲಿ ಹೋಗಿ ನಿಂತಳು.

ಕರಿಯಳೊಬ್ಬಳು ಬಂದು, ರತಿಯು ಮನ್ಮಥನಿಗೆ ಸುರಗಿಯನ್ನು ಕೊಡುವ ಹಾಗೆ, ತಾನೇ ಕೈಯಾರೆ ಕಟ್ಟಿದ ಸುರಗಿಯ ಮಾಲೆಯನ್ನು ಕೊಟ್ಟಳು.

ವೀರನಾದ ಮನ್ಮಥನಿಗೆ ಹೂವಿನ ಖಡ್ಗವನ್ನು ಒಪ್ಪಿಸುವ ರತಿಯಂತೆ ಲತಾಂಗಿಯೊಬ್ಬಳು ನೃಪನಿಗೆ ಹೊಂಬಣ್ಣದ ತಾಳೆಯ ಕಠಾರಿಯನ್ನು ಒಪ್ಪಿಸಿದಳು.

ತುಂಬುಯೌವನ ತುಂಬಿದವಳು ಇನ್ನೊಬ್ಬಳು ಕಾಣಿಕೆಗೆ ಬೆಟ್ಟದಾವರೆ ಯನ್ನು ತಂದುಕೊಟ್ಟು, ಅರಸನನ್ನು ಕಣ್ಣು ತುಂಬ ನೋಡಿ, ಕೈಮುಗಿದು, ಗದ್ದುಗೆಯನ್ನು ಮುಟ್ಟಿ, ವೈಭವದಿಂದ ಒಂದು ಕಡೆ ನಿಂತಳು.

ಇನ್ನೊಬ್ಬಳು, ಮುಂದೆ ಬರಲು ಸಂಕೋಚಪಟ್ಟು ಉಳಿದವರ ಪ್ರೌಯ ಮರೆಯಲ್ಲಿ ಅವಿತುಕೊಳ್ಳುತ್ತಿದ್ದರೆ — ಅವಳನ್ನು ಒಬ್ಬಳು ಕೈಹಿಡಿದು ಕರೆದುತಂದು, ಅರಸನಿಗೆ ಕೈಯ ಕಾಣಿಕೆ ಕೊಡಿಸಿದಳು.

ಇನ್ನೊಬ್ಬಳು ಬಾಲೆ ಅಂಜುತ್ತ ಅಂಜುತ್ತ ಬಂದು, ಅರಸನಿಗೆ ಕೆಂಪುಜಾಜಿಯ ಸರ ಕೊಡುವಾಗ, ಭಯಗೊಂಡ ಅವಳ ಕೈಯಿಂದ

ಕೆಂಪುಜಾಜಿ ಜಾರಿ ಚೆಲ್ಲಿದರೆ — ಸುತ್ತ ನಿಂತವರು ಸೇವಕಿಯರು " ಇದು ಕೈಕಾಣಿಕೆಯಲ್ಲ. ಇದು ಅರಸನಿಗೆ ಪುಷ್ಪಾಂಜಲಿ" ಎಂದರು.

ಮತ್ತೊಬ್ಬಳು ಮುಗ್ಧೆ ಎಲ್ಲರ ಮುಂದೆ ನಾಚುತ್ತ ಬಂದು, ಮಲ್ಲಿಗೆಯ ಸರವನ್ನು ಕೊಡುವಾಗ ಮಲ್ಲಿಗೆ ಜಾರಿದರೆ-ಅರಸನು "ಮಲ್ಲಿಗೆ ಜಾರಿದರೇನು! ಅದು ನಮ್ಮ ಮಲ್ಲಿಗೆ ಅಲ್ಲವೆ!" ಎಂದು ಅವಳನ್ನು ನಗಿಸಿದನು.

ಬೇರೊಬ್ಬಳು ಒಂದು ಪಾದರಿ ಹೂವನ್ನು ಕೊಡುವಾಗ, ಅದು ಜಾರಿ ಅರಸನ ಪಾದದ ಹತ್ತಿರ ಬಿತ್ತು. ಸೋತು ಕಾಲಿಗೆರಗಿದ ಪಾದರಿಯನ್ನು ನೂಕುವಂತೆ ಅರಸನು ಅದನ್ನು ಕಾಲಿನಿಂದ ಒದೆದನು.

ಅದನ್ನು ಕಂಡವಳು, ಅಂತಃಪುರದ ಹಿರಿಯು ಪಾದಿಯಾದ ಪಂಡಿತೆ ಎಂಬವಳು, "ಪರಸ್ತ್ರೀಯರಿಗೆ ಸಹೋದರನಾದ ನಿನ್ನ ಬಳಿಗೆ ಪಾದರಿ ಬರಬಹುದೇ, ಭರತೇಶಾ! ನೀನು ಕಾಲಿನಿಂದ ಒದ್ದದ್ದು ಸರಿಯಾಯಿತು!" ಎಂದಳು. ಪಾದರಿ ಎಂದರೆ ಪಾರಿಜಾತದ ಹೂವೆಂದೂ ಆಗುತ್ತದೆ, ನಡತೆ ಕೆಟ್ಟ ಹೆಣ್ಣೆಂದೂ ಆಗುತ್ತದೆ ಎಂಬುದನ್ನು ಬಲ್ಲ ಭರತನಿಗೆ ಅವಳ ಮಾತು ಕೇಳಿ ನಸುನಗೆ ಬಂತು. "ತುಂಬ ಶೀಲವತಿಯರಾದ ನಿನ್ನ ಹೆಂಡಿರು ತಮ್ಮ ಕಡೆಗೊಬ್ಬ ಪಾದರಿ ಬಂದರೆ, ಹಿಡಿದು ತಂದು ನಿನಗೆ ಒಪ್ಪಿಸಿದರೂ ಶೀಲವಂತನಾದ ನೀನು ಕಾಲಿನಿಂದ ಆಚೆ ತಳ್ಳಿದ್ದು—ಇದು ಆಶ್ಚರ್ಯ!" ಎಂದಳು, ಪಂಡಿತೆ.

ಇತರ ಅರಸಿಯರು ಬಂದರು, ಇತರ ಕಾಣಿಕೆಯಿತ್ತರು. ಕಡೆಗಣ್ಣಿನ ಪ್ರಭೆಯನ್ನು ಕುಡುಮಿಂಚಿನಂತೆ ಕೆದರುತ್ತ ಬಂದ ರಮಣಿಯೊಬ್ಬಳು ಮುಡಿವಾಳದ ಗೊಂಚಲನ್ನು ಕೊಟ್ಟರೆ, ಬೇರೊಬ್ಬ ಭಾವಕಿ ತನ್ನ ಮಾವನ ಮಗನ ಹಸ್ತದಲ್ಲಿ ಮಾವಿನ ಚಿಗುರನ್ನು ತಂದಿಟ್ಟಳು. ದುಂಬಿಗಳು ಸುತ್ತಿ ಸುಳಿದು ನವಿಲುಗರಿಯ ಛತ್ರಿಯಂತೆ ಕಂಗೊಳಿಸುತ್ತಿದ್ದ ಕೆಂಪು ಕಣಿಗಿಲೆಯ ಕಾಣ್ಕೆಯನ್ನು ಮತ್ತೊಬ್ಬ ಮತ್ತಕಾಶಿನಿ ತಂದಿತ್ತು ಕೈಮುಗಿದರೆ, ಸಾಲುಮುತ್ತಿನ ತೊಡಿಗೆಯನ್ನು ತೊಟ್ಟ ಲೋಲಾಕ್ಷಿಯೊಬ್ಬಳು ಬಂದದ್ದು – ಅದೇ ಅರಸನ ಕಡೆಗೆ ಬಂದು ಮಲ್ಲಿಗೆಯ ಬಳ್ಳಿ ನಡೆದುಬಂದಹಾಗಿತ್ತು.

ಜ್ಯೋತಿಗಳ ಹಾಗಿರುವ ರತ್ನಭೂಷಣಗಳನ್ನು ಮೈತುಂಬ ಜೋತು ಬಿಟ್ಟು ಒಲೆದಾಡುತ್ತ ಬಂದ ಅಬಲೆಯೊಬ್ಬಳು, ಜ್ಯೋತಿರ್ಲೋಕದ ಹೆಣ್ಣು

ಭೂಕಾಂತನ ಬಳಿಗೆ ಬಂದಂತೆ ಬಂದಳು. ಇನ್ನೊಬ್ಬಳು ಕರಿಯಳು ಮುತ್ತು ಮಾಣಿಕ್ಯಗಳನ್ನು ಸೇರಿಸಿ ತೊಟ್ಟದ್ದು ನೋಡಿದರೆ — ನಕ್ಷತ್ರಗಳೂ ಮಿಂಚುಹುಳುಗಳೂ ಸೂರ್ಯನಿಗೆ ಹೆದರಿ ಕತ್ತಲೆಯ ಮರೆಹೊಕ್ಕಹಾಗಿತ್ತು.

ಮತ್ತೊ ಒಬ್ಬಳು ಬಂದಳು. "ನೀನೂ ನಾನೂ ಗಂಡಹೆಂಡಿರು ಎಂಬುದಕ್ಕೆ ಇದೋ – ಕೆಂಪವನ್ನು ಹಿಡಿದಿರುವುದು ಇದೇ ಸಾಕ್ಷಿ. ಕೋ!" ಎಂಬಂತೆ ಒಂದು ಗುಂಡುಮಾಣಿಕ್ಯವನ್ನು ಗಂಡನಿಗೆ ಕೊಟ್ಟಳು.

ಇನ್ನೊ ಒಬ್ಬಳು ಬಂದಳು. ಮುತ್ತಿನ ಮಣಿಯನ್ನು ತಂದು ಮನಃಪ್ರಿಯನ ಕೈಯಲ್ಲಿ ಕೊಟ್ಟು ಕೈಮುಗಿದಳು.

ಅದನ್ನು ಕಂಡವಳು, ಪಂಡಿತೆ "ಭರತಚಕ್ರೇಶ! ಮುಖ ಮುಖ ಸೋಕಿ ಮುತ್ತು ಕೊಡುವುದು ಲೋಕದಲ್ಲಿ ಉಂಟು. ಆದರೆ ಕೈಗೆ ಕೈ ಸೋಕಿ ಮುತ್ತು ಕೊಡುವುದು — ಇದು ವಿಚಿತ್ರ!" ಎಂದು ಹೇಳಿ, ಇಷ್ಟು ನಗಿಸಿದಳು.

ಮತ್ತಿನವರೆಲ್ಲ ಚಿನ್ನದ ಹೂವು ಬೆಳ್ಳಿಯ ಹೂವು ಕಸ್ತೂರಿ ಕನ್ನಡಿಗಳನ್ನು ಕಾಣಿಕೆಕೊಟ್ಟು, ಕಾಮರಾಯನಿಗೆ ಕಾಣಿಕೆಯಿಕ್ಕಿ ನಿಂತು ಓಲೈಸುವ ವನದೇವಿಯರ ಹಾಗೆ, ಆ ವನಿತೆಯರೆಲ್ಲ ಆ ಲಲನಾಜೀವಮೋಹನನ ಪಕ್ಕದಲ್ಲಿ ನಿಂತಿದ್ದರು.

೩

ಅರಸನು ಕಣ್ಣುಸುಳಿಸಿ ಎಲ್ಲರನ್ನೂ ನೋಡಿದನು. ಸ್ವಲ್ಪ ಹೊತ್ತಿನ ಮೇಲೆ ಮೆಲ್ಲಮೆಲ್ಲನೆ ಕೈಸನ್ನೆಯಿಂದ ಕುಳ್ಳಿರಹೇಳಿದನು. ಅರಸಿಯರೆಲ್ಲರೂ ಒಪ್ಪವಾಗಿ ಮೃದುವಾದ ಹಾಸುಗಳ ಮೇಲೆ ಕುಳಿತರು. ಅರಸನ ಸನ್ನೆಯಂತೆ ಪಂಡಿತೆ ತಾನೂ ಕುಳಿತಳು.

ನವರತ್ನದ ಮಂಟಪದಲ್ಲಿ ಚಿನ್ನದ ತಾವರೆಯಂತೆ ಹೊಳೆಯುವ ಗದ್ದುಗೆಯ ಮೇಲೆ ಭರತರಾಜೇಂದ್ರನು ಕುಳಿತಿದ್ದನು. ಸಹಜವಾದ ದೇಹಕಾಂತಿ, ತೊಟ್ಟ ಭೂಷಣಗಳ ಕಾಂತಿ, ಕುಳಿತ ಮಂಟಪದ ಅನುಪಮ ಕಾಂತಿ ಮೂರೂ ಸೇರಿ, ಉದಯಕಾಲದ ದಿನಪತಿಯ ಹಾಗೆ ಆ ಜನಪತಿ ಇದ್ದನು.

ಎಲೆಯಡಿಕೆ ಚೀಲ, ತಂಬುಲ ಉಗುಳುವ ಪಾತ್ರೆ, ಚಾಮರ, ಗಿಂಡಿ ಇವುಗಳನ್ನು ಹಿಡಿದ ಊಳಿಗದ ಹೆಣ್ಣುಗಳು ಸಾಲಭಂಜಿಕೆಗಳಂತೆ ಎಡಬಲಗಳಲ್ಲಿ ನಿಂತು ಸೇವಿಸುತ್ತಿದ್ದರು. ವೀಣೆ, ದಂಡಿಗೆ, ಸ್ವರಮಂಡಲ, ವೇಣು ಮುಂತಾದ ವಾದ್ಯಗಳನ್ನು ಮುಂದಿರಿಸಿಕೊಂಡು ಗಾಯಕಿಯರು ಗಾನ ಮಾಡಲು ಸಿದ್ಧವಾಗಿದ್ದರು.

ಭರತರಾಜೇಂದ್ರನ ಮುಂದೆ ಎಡಬಲಗಳಲ್ಲಿ ಚಾಮರಗಳನ್ನು ಬೀಸುವ ತರುಣಿಯರ ತಂಡವು – ಮನ್ಮಥನ ಮುಂದೆ ಅತ್ತ ಇತ್ತ ಹಾರಿ ನಲಿದಾಡುವ ರಾಜಹಂಸಗಳ ಸಾಲಿನ ಹಾಗಿತ್ತು.

ರಾಜನು ಗಾಯಕಿಯರ ಮುಖ ನೋಡಿದನು. ಗಾಯಕಿಯರು ಆತನ ನೋಟವನ್ನು ಅರ್ಥಮಾಡಿಕೊಂಡು, ಸ್ಥಾಯಿ ಬಜಾವಣೆ ಗಮಕ ಇವು ವ್ಯಕ್ತವಾಗುವಂತೆ ಹಾಡಲು ಸಿದ್ಧರಾದರು.

ಅರ್ಧ ತೆರೆದ ತಾವರೆಯಲ್ಲಿ ಇದ್ದ ಮರಿದುಂಬಿ ಸ್ವರನಾಡಿ ಹೊರಗೆ ಬರುವಂತೆ ಚೊಕ್ಕಟವಾಗಿ ಕೆಂಪುಬಾಯಿ ತೆರೆದು ಆಲಾಪನೆಯನ್ನು ವಿರಚನೆ ಮಾಡಿದರು. ನೋಟ ರಾಯನ ಮೇಲೆ, ನೆನಪು ರಾಗದ ಮೇಲೆ, ನೀಟವಾದ ತಂತಿಯಮೇಲೆ ಬೆರಳು ಇಟ್ಟು, ಆ ಚಾಟುಕಾತಿಯರು ಆಲಸ್ಯವನ್ನು ತೊರೆದು ಹಾಡಿದರು.

ಮೊದಲು ಉದಯರಾಗವನ್ನು ಎತ್ತಿಕೊಂಡರು. ಸಿಕ್ಕಿದ ನಲ್ಲಳು ಮುನಿದ ನಲ್ಲನ ಮುಂದೆ ಬಿಕ್ಕುಳಿಸುತ್ತ ನುಡಿಯುವ ಹಾಗೆ, ಲೆಕ್ಕಕ್ಕೆ ಜೊತೆಯಾಗಿ ಕೊರಳು ಕುಣಿದು ಧ್ವನಿಯಿಕ್ಕುವ ರಾಗದಲ್ಲಿ, ಅರುಹಂತನನ್ನು ಕುರಿತು ಹಾಡಿದರು — ಆ ಉದಯಕಾಲದಲ್ಲಿ ಅದನ್ನು ಕೇಳಿದವರಿಗೆ ಜ್ಞಾನದ ಉದಯ ಆಗುವ ಹಾಗೆ."

ಅನಂತರ ದೇವಗಾಂಧಾರಿ ಭೂಪಾಳಿ ಧನ್ಯಾಸಿ ವೇಳಾವಳಿ ಮತ್ತು ಸೌರಾಷ್ಟ್ರ ಎಂಬ ಪಾವನರಾಗಳಲ್ಲಿ ಮತ್ತೆಯೂ ಅರ್ಹಂತನ ಸ್ತುತಿಯನ್ನು ಹಾಡಿದರು.

"ನೀನು ನಮ್ಮ ಗಾನಕ್ಕೆ ಸಹಾಯವಾಗು. ಏಳೇಳು" ಎಂದು ಮಲಗಿದ್ದ ಸರಸ್ವತಿಯನ್ನು ತನ್ನ ಬೆರಲಿಂದ ಮಿಡಿದು ಬೇಡುವಂತೆ, ಆ ಜಾಣೆ ತನ್ನ ಎದುರಿನ ಭಾರಿದಂಡಿಗೆಯನ್ನು ಬೆರಲಿಂದ ಮಿಡಿದಳು. ಗಾಢನಿದ್ರೆ

ಯಲ್ಲಿದ್ದ ತನ್ನ ನಲ್ಲನನ್ನು ಮುದ್ದಿಸಿ ಕರೆಯುತ್ತಾ, ಅವನನ್ನು ಬೆರಳಿಂದ ಮೀಟಿ, ಸರಸಕ್ಕೆ ಏಳಿಸುವ ಹಾಗೆ ಹಾಡುತ್ತ ಆ ತರುಣಿ ದಂಡಿಗೆಯನ್ನು ಮಿಡಿದಳು.

ಹೀಗೆ ಅರ್ಹಂತದೇವನನ್ನೂ ಸಿದ್ಧರನ್ನೂ ಮುನಿಗಳನ್ನೂ ಸಂಗೀತದಲ್ಲಿ ಸ್ಮರಿಸಿ, ಭರತೇಶನ ಮನಸ್ಸಿನ ರೀತಿಯನ್ನು ಅರಿತು, ಆ ನೀರೆಯರು ಭೋಗಯೋಗಗಳೆರಡನ್ನೂ ಬೆರಸಿ ಹಾಡಿದರು.

" ಸುಖವನ್ನು ತಾನು ಅನುಭವಿಸುವೆನೆಂಬುದು ಸುಲಭವೆ ? ಅದಕ್ಕೆ ಇಹ ಪರ ಎರಡರ ಚಿಂತೆಯೂ ಬೇಕು. ಇದಿರಿಗಿರುವುದನ್ನು ಅರಿಯ ಬೇಕು, ಜೊತೆಗೆ ತನ್ನನ್ನು ಅರಿಯಬೇಕು. ಇದಕ್ಕೆ ಜಾಣತನ ಬೇಕು " ಎಂದು ಹಾಡಿದರು.

" ಎರಡೂ ಕಣ್ಣಿಂದ ಲೋಕವನ್ನು ನೋಡಬೇಕು. ತನ್ನ ಸ್ಥಿತಿ ಯನ್ನು ಸುಜ್ಞಾನ ದೃಷ್ಟಿಯಲ್ಲಿ ತಿರುಗಿ ದೃಷ್ಟಿಸಬೇಕು. ಇದರಿಂದ ಆಗುವ ಸುಖದ ಸಿದ್ಧಿ ಮುಕ್ಕಣ್ಣನಿಗಲ್ಲದೆ ಎಲ್ಲರಿಗೆ ಬರುವುದೆ ! " ಎಂದು ಹಾಡಿದರು.

" ಬಾಲೆಯರೊಡನೆ ಇರಬೇಕು. ಆತ್ಮರತಿಯೆಂಬ ಹಾಲುಗಡಲಲ್ಲೂ ಇರಬೇಕು. ಈ ರೀತಿಯಾದ ಸುಖಸಿದ್ಧಿ ಪುರುಷೋತ್ತಮನಿಗಲ್ಲದೆ ಆಲಸ್ಯ ಪುರುಷನಿಗೆ ಏಕೆ ಆಗುವುದು ? " ಎಂದು ಹಾಡಿದರು.

" ಸ್ವಂತ ಸತಿಯ ಕೂಡೆ ನುಡಿದಾಡಬೇಕು. ಒಮ್ಮೆ ಸರಸತಿ ಯೊಡನೆ ನುಡಿಯಲು ಬೇಕು. ಪರಸತಿಯರಲ್ಲಿ ಮೌನವಾಗಿರಬೇಕು. ಮುಕ್ತಿಸತಿಯನ್ನು ಸದಾ ಧ್ಯಾನಿಸುತ್ತಿರಬೇಕು. ಸುಖಸಿದ್ಧಿ ಬೇಕೆನ್ನುವವನು ಈ ಪ್ರಕಾರವಾದ ನಾಲ್ಕುಮುಖಗಳುಳ್ಳವನಾಗಬೇಕು " ಎಂದು ಹಾಡಿದರು.

" ಮೈಯ ಸುಖಕ್ಕೆ ಮರುಳಾಗಿ ತಮ್ಮ ಆತ್ಮನ ಸ್ಥಿತಿಯನ್ನು ಅರಿ ಯದೆ ಭೋಗಿಸುವುದು – ಹೊಟ್ಟನ್ನು ಬಿಗಿಹಿಡಿದು ಅಕ್ಕಿಯನ್ನು ಬಿಸುಟ ಬುದ್ಧಿಹೀನರ ಮಾರ್ಗವಾಗುವುದು " ಎಂದು ಹಾಡಿದರು.

" ತಾನೊಂದನ್ನೂ ಬಯಸನು. ಸೌಭಾಗ್ಯ ತನ್ನನ್ನು ಬಯಸಿ ತನಗೆ ತಾನೇ ಬರುತ್ತಿದೆ. ತಾನು ಬೇರೊಂದನ್ನು ನೆನೆಯನು, ಆದರೂ ಲೋಕ ತನ್ನನ್ನು ನೆನೆದು ಧ್ಯಾನಿಸುತ್ತಿರುವುದು." ಎಂದು ಭರತೇಶನ ಆತ್ಮರತಿ ಯನ್ನು ಕುರಿತು ಹಾಡಿದರು.

“ನಸುನಗೆಯಿಂದ ತನ್ನ ಹೆಂಡಿರನ್ನು ನೋಡಿ, ಅವರ ಕಣ್ ಕಿವಿ ಮೈ ಮನಸುಗಳಿಗೆ ಜುಮ್ಮುದಟ್ಟಿಸುವನು. ಅವರೊಡನೆ ಬೆಸುಗೆಯಾದ ಹಾಗಿದ್ದೂ ಬೇರೆಯೇ ಆಗಿರುವನು. ಇಂಥ ಈ ಆತ್ಮರಸಿಕನ ರಹಸ್ಯವನ್ನು ಬಲ್ಲವರು ಯಾರು!” ಎಂದು ಹಾಡಿದರು.

“ರತಿಸುಖದಲ್ಲಿ ಸಿಕ್ಕಿದಂತಿರುವನು, ಆದರೂ ಸಿಕ್ಕನು. ಅಲ್ಲಿ ಸೊಕ್ಕಿದಂತೆ ಇರುವನು, ಆದರೂ ಸೊಕ್ಕನು. ಠಕ್ಕರ ಹಾಗೆ ಇರುವನಾದರೂ ಅದು ಠಕ್ಕಲ್ಲ. ಇದು ನಿಜವನ್ನು ಕಣ್ಣಿಕ್ಕಿ ಕಂಡವನ ಲೀಲೆ.” ಎಂದು ಹಾಡಿದರು.

“ಇದು ಮಾರ್ಗವಲ್ಲ ಎಂಬಂತೆ ಅನ್ಯರಿಗೆ ತೋರುವುದು, ಆದರೂ ಇವನು ಸನ್ಮಾರ್ಗದಲ್ಲಿ ಇರುವನು. ಆತ್ಮವಿಜ್ಞಾನಿಯ ಅಂತರ್ಗತವನ್ನು, ಜಿನನೊಬ್ಬ ಹೊರತು, ಬೇರೆ ಯಾರು ತಿಳಿಯಬಹುದು? ಗೂಳಿ ನಡೆಯುವ ಹೆಜ್ಜೆ ತೋರಿಬರುವ ಹಾಗೆ ಗಾಳಿ ಹೋದ ಹಜ್ಜೆ ತೋರಿಬರುವುದೆ? ಸಾಮಾನ್ಯರ ಒಳಗನ್ನು ಕಾಣಲಾಗುವಂತೆ ತತ್ತ್ವಶೀಲನ ಒಳಗನ್ನು ಕಾಣುವವರಾರು?” ಎಂದು ಹಾಡಿದರು.

ಕಟ್ಟಕಡೆಗೆ “ಇದು ನಮ್ಮ ಭರತಚಕ್ರೇಶನ ಚರಿತ್ರವಲ್ಲವೆ, ಇದರಲ್ಲಿ ಬೇರೆ ಏನು ಹುಡುಕಿದರೂ ಸಿಕ್ಕುವುದಿಲ್ಲ. ಇದು ಆತನು ಪೂರ್ವದಲ್ಲಿ ಆತ್ಮಭಾವನೆಯನ್ನು ಮಾಡಿದ್ದರ ಫಲ” ಎಂದು ಮುಕ್ತಾಯಮಾಡಿದರು.

ಭರತನು ಅವರನ್ನು ಕರೆದು, “ಲೇಸಾಗಿ ಎದೆತಟ್ಟಿ ಹಾಡಿದಿರಿ” ಎಂದು ಅವರಿಗೆ ಉಡುಗೊರೆಗಳನ್ನು ಕೊಟ್ಟನು. ಅವರು ಆ ಪಟ್ಟದರಸನ ಕಾಲಿಗೆರಗಿ, ಬೀಳ್ಕೊಂಡು, ಓರಣವಾಗಿ ಒಂದುಕಡೆ ಕುಳಿತರು.

ಕಮಲಪುಷ್ಪಗಳು ಸುತ್ತಲೂ ಕಂಗೊಳಿಸುವಾಗ ನಟ್ಟನಡುವೆ ಕಾಣಿಸಿಕೊಳ್ಳುವ ರಾಜಹಂಸದ ಹಾಗೆ ಆ ಭರತರಾಜೇಂದ್ರನು ತನ್ನ ಅರಸಿಯರ ಓಲಗದಲ್ಲಿ ಇದ್ದನು — ಎಂಬ ಇಲ್ಲಿಗೆ ಬೆಳಗಿನ ಓಲಗ ಮುಗಿಯಿತು.

೪

ಹೀಗೆ ಆ ಹೆಂಡಿರ ಓಲಗದಲ್ಲಿ ಅಭಿನವಮನ್ಮಥನಾದ ಆ ರಾಜನು ಇರುವಾಗ, ಗಾಯಕಿಯೊಬ್ಬಳು ಪಂಡಿತೆಯ ಕಿವಿಕಚ್ಚಿಕೊಂಡು ಏನೋ ಒಂದು ಮಾತನ್ನಾಡಿದಳು.

ಪಂಡಿತೆ ಗರಗರನೆ ಎದ್ದಳು. ಕೈಮುಗಿದು, ನಗುತ್ತ, "ಅರಸ! ಒಂದು ಬಿನ್ನಹವುಂಟು. ಸರಸಲೀಲೆಯ ಒಂದು ಹೊಸಕಾವ್ಯವುಂಟು. ದಯಮಾಡಿ ಲಾಲಿಸಬೇಕು" ಎಂದು ಸಂಭ್ರಮದಿಂದ ನಿವೇದಿಸಿದಳು.

"ಅದನ್ನು ಯಾರು ಹೇಳಿದವರು? ಅದು ಯಾರ ವರ್ಣನೆ? ಮತ್ತೆ ಆ ಹೊಸಕೃತಿಯನ್ನು ಪರಿಶೀಲಿಸಿ ತಿದ್ದಿದವರು ಯಾರು?" ಎಂದು ಅರಸನು ಕೇಳಿದನು.

"ಅದು ಪರರು ಹೇಳಿದ್ದಲ್ಲ. ಪರರ ವರ್ಣನೆಯಲ್ಲ. ಪರರು ಯಾರೂ ತಿದ್ದುವ ದಕ್ಷರು ಇಲ್ಲ. ಅರಸ! ನಿನ್ನ ಅರಮನೆಯೊಳಗಾದ ಕೃತಿ ಇದು ನಿನ್ನ ಚರಿತ. ನೀನೇ ತಿದ್ದಬೇಕು" ಎಂದಳು ಪಂಡಿತೆ.

"ಅರಮನೆಯೊಳಗೆ ಆದುದು ಎಂದರೆ, ಯಾರೆಂದು ನಿರ್ಧರಿಸಬಹುದು. ಹೊಸಕೃತಿಯನ್ನು ವಿರಚಿಸಿದ ಆಕೆಯ ಹೆಸರು ಹೇಳು." ಎಂದು ಭರತನು ಮಂದಸ್ಮಿತದಿಂದ ಕೇಳಿದನು.

"ನೆನ್ನೆ ಕುಸುಮಾಜಿಯರು ಅರಗಿಳಿಯೊಡನೆ ಒಲಿದು ಸರಸದಿಂದ ನುಡಿದಾಡಿದರೆ, ಅದನ್ನು ನೆರೆಮನೆಯೊಳಗಿದ್ದ ಸುಮನಾಜಿಯರು ಕೇಳಿ, ಚರಿತೆ ಮಾಡಿದರು, ಅರಸೀರಾ! ಸುಮನಾಜಿಯರ ನಿಲಯಕ್ಕೆ ನೆನ್ನೆ ವಿನೋದಕ್ಕಾಗಿ ಅಮರಾಜಿಯರು ನಡೆದುಬಂದು, ಅಮೃತವಾಚಕನೆಂಬ ಗಿಳಿಯೊಡನೆ ಆಕೆ ಎರೆತರದು ನುಡಿಯುವುದನ್ನು ಕೇಳಿದರು. ಕೇಳಿ, 'ಕುಸುಮಾಜಿ ನುಡಿದ ಅಂದ ಚೆನ್ನಾಯ್ತು. ಸುಮನಾಜಿ, ನೀನಿದನ್ನು ಹೊಸ ಕೃತಿ ಮಾಡು. ಪರಮಪ್ರೀತಿಯಿಂದ ನಾನು ಇದನ್ನು ಬರೆಯುತ್ತೇನೆ' ಎಂದು ಅಮರಾಜಿಯರು ಬರೆದು ಹೇಳಿದ ಈ ಕಾವ್ಯವನ್ನು ಕೇಳು, ರಾಜ!"

"ಹಾಗಾದರೆ ಆಗಲಿ. ನೀನು ಕುಳ್ಳಿರು. ಕಾವ್ಯವನ್ನು ಓದಿಸು."

ಲಲನೆಯೊಬ್ಬಳು ಅರಸನ ಅಪ್ಪಣೆಯ ಮೇರೆಗೆ ಓದಲು ಉದ್ಯೋಗಿಸಿ ಪುಸ್ತಕವನ್ನು ಕೈಯಲ್ಲಿ ಹಿಡಿದು ಎದುರಿಗೆ ಕುಳಿತಳು.

ಕುಸುಮಾಜಿ ಧಿಗಿಲನೆ ಎದ್ದಳು. ಕೈಮುಗಿದು, "ಈದಿನ ಹಗಲು ನನಗೆ ಒಂದು ವ್ರತ ಉಂಟು. ಅದನ್ನು ನಡಸಲು ನಾನು ಜಿನಾಲಯಕ್ಕೆ ಹೋಗಿಬರುತ್ತೇನೆ" ಎಂದಳು.

ಅದಕ್ಕೆ ಆ ರಾಯನು ನಗುತ್ತ, "ಒಳ್ಳೆಯದು. ಹೋಗು. ಆದರೆ! ವ್ರತಕ್ಕೆ ಕಂಕಣ ಬೇಡವೆ? ಇದೋ ಹಿಡಿ!" ಎಂದು ವಿಲಾಸದಿಂದ ಕೈನೀಡಿದನು.

ಕುಸುಮರಾಜಿ ಅದೂ ನಿಜವೆಂದು ರಾಜನ ಕೈಯ ಕಂಕಣಕ್ಕೆ ಕೈನೀಡಿ ದರೆ--ಗಂಡಾನೆ ತನ್ನ ಹೆಣ್ಣಾನೆಯ ಸೊಂಡಿಲನ್ನು ಹಿಡಿಯುವಂತೆ ದೊರೆಯು ಅವಳ ಕೈಯನ್ನು ಹಿಡಿದನು.

"ಯಾರಿಗೆ ಕಲಿಸುತ್ತೀಯೆ! ನನಗೆ ತಿಳಿಯದ ಹಾಗೆ ನಿನಗೆ ವ್ರತ ವನ್ನು ಕೊಟ್ಟವರು ಯಾರು? ಸಾಕು, ಬಾ. ಹತ್ತಿರ ಕುಳ್ಳಿರು. ನನ್ನಾಣೆ!" ಎಂದು ಆಕೆಯನ್ನು ತನ್ನ ಬಳಿಗೆ ಕರೆದುಕೊಂಡು, "ನೀನು ಪ್ರೀತಿಗಾಗಿ ಗಿಳಿಗೆ ಓದಿಸಿದ್ದು ಈ ಮಾನಿನಿಯರಿಗೆ ಪ್ರಿಯವಾಯಿತು. ಅದನ್ನು ನಾನು ಕೇಳಿ ಪ್ರೀತಿಪಡಬೇಡವೆ? ಸುಖಗಾನದ ಮಧ್ಯೆ ಏಳಬಹುದೆ, ಮುಗ್ಧೆ! ನೀನು ಎದ್ದುದ್ದು ಏಕೆಂದು ನಾನು ಬಲ್ಲೆ. ನೀನು ಏಕಾಂತದಲ್ಲಿ ಗಿಳಿಯೊಡನೆ ಆಡಿದುದನ್ನು ಇಲ್ಲಿ ಎಲ್ಲರ ಮುಂದೆ ರಚ್ಚೆಗೆ ತಂದರೆಂದು ಎದ್ದೆಯಲ್ಲವೆ! ನಿಜವೇ! ಅನ್ಯರಿಗೆ ತನ್ನ ಗುಟ್ಟನ್ನು ತೋರದೆ ನಡೆಯುವುದು ಸತ್ಕುಲದ ಕನ್ಯೆಯರ ಅಂಗಲಕ್ಷಣ. ಆದರೆ ಇಲ್ಲಿ ಅನ್ಯರು ಯಾರು? ಎಲ್ಲರೂ ನನ್ನವರೇ ಅಲ್ಲವೆ! ಬಾ, ಕುಳ್ಳಿರು" ಎಂದನು.

"ಕಂಡೆಯಾ ಪಂಡಿತೆ, ನಮ್ಮ ಕುಸುಮರಾಜಿ ಕುಸುಮದ ಚೆಂಡಿನಂತೆ ಎದ್ದ ಲಂಘನವನ್ನು?"

"ಕಂಡೆ ಹೌದು, ಸ್ವಾಮಿ. ಕಾಂತೆಯರ ಗುಟ್ಟನ್ನು ನಿಮ್ಮಂತೆ ಕಂಡವರು ಬೇರೆ ಯಾರು! ತನ್ನ ಎಳೆಯಾಟದ ಹಚ್ಚೆ ಪರರಿಗೆ ತೋರಿತು ಎಂದು ಇವಳಿಗೆ ಲಜ್ಜೆಯಾಯಿತು, ದೇವ. ಅದು ಸಜ್ಜನಸತಿಯರ ಗುಣ."

"ಅದಕ್ಕಲ್ಲ, ಪಂಡಿತೆ. ನೋಡು ಮತ್ತೆ: ವ್ರತವೆಂದು ನಮಗೆ ಠಕ್ಕುಮಾಡುವ ಈ ಆಟ!"

"ಆದರೂ, ಮುಗ್ಧೆಯ ಈ ಚಾತುರ್ಯ ನಿಮ್ಮನ್ನು ಗೆಲ್ಲತಕ್ಕ ತಂತ್ರವೆ, ರಾಜೇಂದ್ರ? ನೀನು ಕುಸುಮರಾಜಿಯರ ಕೈಹಿಡಿದು ನಿಲ್ಲಿಸಿದ್ದು ಚೆನ್ನಾ ಯಿತು. ಇನ್ನು ಆಕೆ ನಿನ್ನ ಒತ್ತಿನಲ್ಲಿ ಇರಲು ನಾಚುವಳು. ಆದ್ದರಿಂದ ಅವಳು ತನ್ನ ಒಡಹುಟ್ಟಿದವರ ಒತ್ತಿನಲ್ಲಿ ಇರಲಿ."

“ ಹೌದೇ, ಕುಸುಮಾಜಿ ? ಹಾಗಾದರೆ ಹೋಗು. ನೀನು ಎಲ್ಲ ಮಹಿಳೆಯರೊಡನೆ ಎಂದಿನಂತೆ ಸಹಜವಾಗಿ ಕುಳಿತುಕೊ.”

— ಎಂದು ಅರಸನು ಅವಳನ್ನು ಕಳುಹಿಸಿಕೊಡಲು, ಆಕೆ ಶೀಘ್ರ ವಾಗಿ ಎದ್ದುಹೋಗಿ ತನ್ನವರೊಡನೆ ಕುಳಿತಳು.

“ ಇನ್ನು ಕಾವ್ಯವನ್ನು ಓದು ” ಎಂದ, ರಾಜ.

ಹಾಡುವ ಆ ಕನ್ಯೆ, ಪುಸ್ತಕವನ್ನು ಹಿಡಿದು, ಹೆಣ್ಣುಕೋಗಿಲೆ ತಾನೇ ಬಾಯಿ ತೆರೆಯಿತೋ ಎಂದೆನ್ನಿಸುವ ಹಾಗೆ ಓದಿದಳು. ಬುಟ್ಟಿಯಲ್ಲಿ ಪುಸ್ತಕವನ್ನಿಟ್ಟು, ದಾರವನ್ನು ಒತ್ತಿ ಸಡಲಿಸಿ, ಚಿಕ್ಕದಾದ ಓಲೆಗರಿಗಳನ್ನು ಎಡಗೈಯಲ್ಲಿ ಎತ್ತಿಕೊಂಡು, ಬಲಗೈಯಿಂದದೊಡ್ಡ ವೀಣೆಯನ್ನು ಮಿಡಿ ಯುತ್ತ ಓದಿದಳು.

೫

ಅವಳು ಓದಿದ ಕಾವ್ಯ ಈ ಪ್ರಕಾರವಾಗಿತ್ತು :

ಆರಂಭದಲ್ಲಿ ನಮ್ಮ ಮಾವಾಜಿಯಾದ ಆದಿಜಿನೇಶ್ವರನ ಪಾದಗಳನ್ನು ನೆನೆದು, ನಮ್ಮಕ್ಕನಾದ ಅನುರಾಜಿಯ ಆಜ್ಞೆಯಿಂದ ಒಂದು ಕೃತಿಯನ್ನು ಒಲಿದು ಹೇಳುತ್ತೇನೆ. ನಮ್ಮ ತಂಗಿಯಾದ ಕುಸುಮಾಜಿ ಶೃಂಗಾರಹಾರ ನಾದ ಈ ನಮ್ಮ ಅರಸನನ್ನು ಕುರಿತು ತನ್ನ ಗಿಳಿಯೊಡನೆ ಆಡಿದುದನ್ನು ನಾನು ಸಂಗತಿಮಾಡಿ ಹಾಡುತ್ತೇನೆ.

ಕುಸುಮಾಜಿ ಸರಸಕ್ಕಾಗಿ ಅಮೃತವಾಚಕನೆಂಬ ಹೆಸರಿನ ಗಿಳಿಯನ್ನು ಕರೆಕರೆದು, ತನ್ನ ಪತಿಯ ಗುಣವನ್ನು ಅದರ ಬಳಿ ಹೀಗೆ ಹಾಡು ತ್ತಿದ್ದಳು :

“ ಕೇಳು, ಅಮೃತವಾಚಕ. ನಮ್ಮ ಭರತ ಚಕ್ರೇಶ್ವರನು ಈ ಎಲ್ಲ ರಮಣಿಯರ ಮನಸ್ಸನ್ನು ಭ್ರಮೆಗೊಳಿಸುವ ಈ ರೂಪನ್ನು ಪಡೆಯಲು ಯಾವ ವ್ರತಮಾಡಿದನೊ! ರೂಪವನ್ನು ಹೇಗಾದರೂ ಪಡೆಯಲಿ. ಆದರೆ ಈ ರೂಪಿಗೆ ತಕ್ಕ ಶೃಂಗಾರ ವಿನಯ ವಿಭ್ರಮ ಇವುಗಳನ್ನು ಹೇಗೆ ಪಡೆದನೊ ? ಹೇಳು ಅರಗಿಳಿಯೆ.

“ ಕೇಳು, ಓ ರಾಜಕೀರ. ಆಕಾಶದಲ್ಲಿರುವ ಸೂರ್ಯನು ತಾನು ಒಬ್ಬನೇ ಆದರೂ ನೀರು ತುಂಬಿದ ಹಲವು ಕೊಡಗಳಲ್ಲಿ ಬಿಂಬಿಸುವಂತೆ ಈ ರಾಯನು ಎಲ್ಲ ಹೆಂಡಿರ ಎದೆಗಳನ್ನೂ ತುಂಬಿಕೊಂಡಿರುವುದು ನೋಡು. ಸತ್ತ್ವಶಾಲಿಯಾದ ತಪಸ್ವಿ ಇದ್ದ ವನದಲ್ಲಿ ಹುಲಿ ಹುಲ್ಲೆ ವೈರವಿಲ್ಲದೆ ಸುಳಿಯುವ ಹಾಗೆ ಈ ರಾಯನ ಸನ್ನಿಧಿಯಲ್ಲಿ ಈ ನಾರಿಯರೆಲ್ಲ ಸವತಿಮತ್ಸರವಿಲ್ಲದೆ ಇರುವರು. ತವರುಮನೆಯನ್ನು ಮರೆಯಿಸಿ, ನಿದ್ರೆಗಳನ್ನು ತೊರೆಯಿಸಿ, ಹಗಲುರಾತ್ರಿಯೆನ್ನದೆ ಈ ರಾಜನು ತನ್ನವರನ್ನು ಸುಖದಲ್ಲಿ ಓಲಾಡಿಸುತ್ತಾನೆ.

“ ದಿನದಿನಕ್ಕೂ ಹೊಸಹೊಸದಾದ ಕಾಂತಿಯಿಂದ ಕಂಗೊಳಿಸುವ ಈ ನಮ್ಮ ಪ್ರಾಣನಾಯಕನ ದೇಹವನ್ನು ತಲೆಯಿಂದ ಕಾಲಿನವರೆಗು ವರ್ಣಿಸುತ್ತೇನೆ. ಕೇಳು, ಗಿಳಿಯೆ.

“ ಆಳುದ್ದದ ತಲೆಗೂದಲನ್ನು ಗಂಟಿಕ್ಕಿ ಚುಂಗುಬಿಟ್ಟು ಮುರಿದು ಸುತ್ತಿರುವ ಆ ಶೃಂಗಾರ ಒಂದೇ ಸಾಲದೆ! ಮುಖ ತಿರುಗಿಸಿದ ಕಡೆಗೆಲ್ಲ ನಗುವನ್ನೂ ಚೆಲುವನ್ನೂ ಮೋಹರಸದ ಕಾಂತಿಯನ್ನೂ ಮೊಗೆದು ಮೊಗೆದು ಚೆಲ್ಲುವಂತೆ ಒಪ್ಪುವ ಆ ಮುದ್ದುಮುಖವೊ! ಚಂದ್ರನಲ್ಲಿರುವ ಕರೆಯನ್ನು ತಿರಸ್ಕರಿಸುವಂತೆ ಆ ಹಣೆಯಲ್ಲಿ ಕಸ್ತೂರಿಯ ತಿಲಕ! ಮನ್ಮಥನ ಬಿಲ್ಲನ್ನು ಮೀರಿಸಿದ ಆ ಹುಬ್ಬು! ನರುಗಂಪಿನ ಉಸಿರುಬಿಡುವ ಆ ನಾಸಿಕ! ಮಿರುಗುವ ಕನ್ನಡಿಯಂದದ ಗಲ್ಲ! ಇಚ್ಚೆಗೆ ಬಂದದ್ದನ್ನು ನಚ್ಚಿನ ಹೆಣ್ಣುಗಳು ಕಿವಿಕಚ್ಚಿ ಹೇಳುವಾಗ ಹತ್ತಿದ ಬೆಳುನಗೆಯ ಹಾಗೆ ರಾಯನ ಕಿವಿಯಲ್ಲಿ ಮುತ್ತಿನ ಚೌಕುಳಿ! ಕಡೆಗಣ್ಣಿನ ಕಾಂತಿಯೂ ಕಿವಿಯ ಆಭರಣದ ಕಾಂತಿಯೂ ಆ ಮುಖದ ಕರಿಕೂದಲಿನಲ್ಲಿ ಆಡಿದರೆ, ಮಳೆಯ ಮೋಡದ ಮಧ್ಯೆ ಮರಿಮಿಂಚು ಆಡಿದ ಹಾಗಿರುತ್ತದೆ, ಗಿಳಿಯೆ! ಕೊಬ್ಬಿದ ಯೌವನದ ಮದ ಉಬ್ಬಿ ಹರಿಯುವಂತೆ ಹಬ್ಬಿದ ಆ ಚೆಲುವು ಮೀಸೆಗಳ ಸಾಲೊ! ಕರ್ಪೂರದ ತಂಬುಲದಿಂದ ಕೆಂಪಾದ ತುಟಿಗಳು, ಮಕರಂದ ತುಂಬಿದ ತಾವರೆ ಎಳೆ ಸೂರ್ಯನಿಗೆ ಮೆಲ್ಲನೆ ಅರ್ಘ ಅರಳಿದ ಹಾಗಿವೆ! ಮುತ್ತಿನ ಮಣಿಗೆ ಅರಗಿನರಸ ಹಚ್ಚಿ ಕುಂಬಳದ ಬಿತ್ತದ ಹಾಗೆ ಕೊರೆಕೊರೆದು ಜೋಡಿಸಿದ ಹಾಗಿರುವ ಅವನ ಕೆಂಪುಹಲ್ಲುಗಳ ವಿಸ್ತಾರವನ್ನು ಏನು ಹೇಳಲಿ, ಗಿಳಿಯೆ! ನಮ್ಮ,

ಅರಸ ತಾಂಬೂಲರಸವನ್ನು ನುಂಗುವಾಗ ಎದುರಿಗೆ ತೋರುವ ಆ ನುಣುಪಾದ ಕೊರಳನ್ನು ಏನು ವರ್ಣಿಸಲಿ!

"ಇನ್ನು ಅವನ ತೋಳುಗಳೋ — ಮೋಹಿಸಿಯರಿಗೆ ಮೋಹಪಾಶ! ಮನ್ಮಥನಿಗೆ ಕೈಯಲ್ಲಿ ಐದು ಬಾಣಗಳಾದರೆ, ನಮ್ಮ ಅರಸನಿಗೆ ಅವನ ಹತ್ತು ಬೆರಳೇ ಹತ್ತು ಬಾಣ! ಆ ಅಂಗೈಯ ಕೆಂಪು, ಉಗುರುಗಳ ಹೊಳಪು. ಉಂಗುರಗಳ ಕಾಂತಿ ನೋಡಿದರೆ, ದೊರೆಯ ಭುಜಗಳು ಚೆಲುವಿನ ಬಣ್ಣದ ತಾವರೆಯ ನಾಳಗಳಂತಿವೆ.

"ಹಾರಪದಕಗಳ ರತ್ನಾವಳಿ ತುಂಬಿದ ಆ ವಿಸ್ತಾರವಾದ ಎದೆಯೊ — ಲಾವಣ್ಯಜಲಧಿಯ ನಡುವೆ ಇದ್ದ ರತ್ನದ ದ್ವೀಪದಂತೆ ಒಪ್ಪುತ್ತಿದೆ!

"ಹೊಟ್ಟೆ, ಅಕ್ಕಾಳಿಸಿದರೆ ಬೆನ್ನಿಗೆ ಹತ್ತುತ್ತದೆ. ಆದರೂ ಸಹಜವಾಗಿ ನೋಡಿದರೆ, ಪುಟ್ಟಡೊಳ್ಳು ಉಂಟು. ಅದರೊಳಗಿನ ಹೊಕ್ಕಳು ಅಂತೂ ಹೆಣ್ಣುಗಳ ಕಣ್ಣುಗಳೆಂಬ ಮೀನುಗಳು ಮುಳುಗಿ ಸುಳಿದಾಡುವ ಶೃಂಗಾರ ಜಲದ ಕೊಳವೋ ಎಂಬಂತೆ ಇದೆ.

"ಇದನ್ನು ಯಾರಿಗೂ ಹೇಳಬೇಡ, ಗಿಳಿಯೆ. ಒಮ್ಮೆ ಏನಾಯಿತು ಗೊತ್ತೆ? ಅರಸನ ತೆಳುವಾದ ಹೊಟ್ಟೆಯ ಮೇಲಿನ ಸಣ್ಣ ರೋಮದ ಸಾಲನ್ನು ಕಂಡು, ಇರುವೆಯ ಸಾಲೆಂದು ನಾನು ತೊಡೆದರೆ, ಅದಕ್ಕೆ ರಾಯನು ತುಂಬ ನಕ್ಕನು. ನನಗಂತೂ ನಾಚಿಕೆಯಾಗಿ ಹೋಯಿತು.

"ಇದನ್ನೂ ಅಷ್ಟೆ, ಬೇರೆ ಯಾರಿಗೂ ಹೇಳಬೇಡ. ನಮ್ಮ ರಾಯನ ಹಿಂಭಾಗದ ಮೇಲೆ ಕಿರುನಡು ಹೇಗಿದೆ ಗೊತ್ತೆ? ಆನೆಯ ಎರಡು ಕುಂಭಗಳ ಮೇಲೆ ಮರಿಸಿಂಹ ನಿಂತ ಹಾಗಿದೆ. ಅದರ ಅಡಿಯ ತೊಡೆಗಳೋ — ಸೋಕಿದ ಹೆಂಗುಸರ ಆಯಾಸವನ್ನು ತೊಡೆಯುವಂಥವು. ಇನ್ನು ಆತನ ಹೆಜ್ಜೆಯ ಮೇಲಿನ ಕಾಲೋ—ಕಾಂತಿಗಂಗೆಯಲ್ಲಿನ ಆಮೆಗಳ ಮೇಲೆ ಎರಡು ಮೀನು ನಿಂತಹಾಗೆ ಇವೆ!

"ಕೇಳು, ಗಿಳಿಯೆ. ಆರು ಅಂಗುಲದ ನಡು. ನಾಲ್ಕು ಅಂಗುಲದ ಕೊರಳು. ತೊಡೆಯ ಉದ್ದಕ್ಕೆ ತಾಗುವ ತೋಳು. ತನ್ನ ಉದ್ದದ ತಲೆ ಕೂದಲು. ವಿಶಾಲವಾದ ಹಣೆ. ವಿಸ್ತಾರವಾದ ವಕ್ಷ. ಗುಂಡುಗುಂಡಾದ ಹಿಂಭಾಗ. ಕಂಬದಂತೆ ತೊಡೆ. ಗಿಂಡಿಯಂದದ ನಡು. ರಕ್ತಮಾಣಿಕ್ಯದ

ಚೆಂಡಿನಂತಹ ಹಿಮ್ಮಡಿ. ನಗುಮುಖದಲ್ಲಿ ದೊಡ್ಡ ಮೂಗು, ದೊಡ್ಡ ಕಣ್ಣು ಕಾಡಿಗೆ ಮೀಸೆ, ಬಣ್ಣದ ತುಟಿ. ಆ ದೇಹದ ಹಿಂಭಾಗ ಮುಂಭಾಗ ಮೇಲಾಯ ಕೀಳಾಯ ಎಲ್ಲಾ ಹೊಂದಿಕೊಂಡು ತುಂಬ ಚೆಲುವಾಗಿದೆ, ಗಿಳಿಯೆ!

"ಮೈಯಲ್ಲಿ ಮುತ್ತಿಡಲು ತುಟಿಯೆ ಸಿಹಿ ಎಂಬವರ ಕೂಗು ಇರಲಿ. ಪಚ್ಚೆಯ ಬಣ್ಣದ ಗಿಳಿಯೆ, ಅವನ ಮೈಯೆಲ್ಲ ಸಿಹಿ ಎಂದರೆ, ನಾನು ಏನು ಹೇಳಲಿ!

"ಏನೋ ಹೆಂಡತಿ ಗಂಡನ ಮೇಲಿನ ಪ್ರೇಮದಿಂದ ಹಲವು ರೀತಿಯಾಗಿ ಹೊಗಳಿ ಹೇಳಿದಳು ಎಂದು ಹೇಳದಿರು, ಗಿಳಿಯೆ. ಆ ದಿವ್ಯದೇಹಿಯ ಗುಣಗಳನ್ನು ಹೇಳಲು ನಾನು ಎಷ್ಟರವಳು? ಗಂಡರ ಗಂಡ, ಚೆಲುವರ ಗಂಡ, ಹೆಮ್ಮೆಪಡುವವರ ಹಿಂದಿನ ಗಂಡ ಎಂಬ ಕೊಂಡಾಟಕ್ಕೆ ಒಪ್ಪತಕ್ಕವನು ನಮ್ಮ ಗಂಡನಲ್ಲದೆ ಬೇರೆ ಅಲ್ಲ, ಗಿಳಿಯೆ! ಅವನ ಗುಣವನ್ನು ಅಳೆದು ಹೇಳಿ ಮುಗಿಸಲು ನನಗೆ ಸಾಮರ್ಥ್ಯವಿಲ್ಲ, ಅಮೃತವಾಚಕ. ಇದು ಸುಮ್ಮನೆ ಸೂಚನಾರ್ಥದ ವರ್ಣನೆ ಎಂದು ತಿಳಿದುಕೊ.

"ನೋಡು, ಗಿಳಿ. ನಾನು ಹೇಳಿದ ಮಾತೆಲ್ಲ ನಿನ್ನೊಳಗೇ ಇರಲಿ. ಬೇರೆ ಯಾರಿಗೂ ಹೇಳಬೇಡ. ನೀನು ನನ್ನವನೆಂದು ನಿನ್ನೊಡನೆ ಹೇಳಿದೆನೆ ಹೊರತು, ನಾನು ಇದನ್ನು ಇನ್ನೊಬ್ಬರಿಗೆ ಹೇಳುವವಳಲ್ಲ.

"ಏನಿದು, ಹಕ್ಕಿ? ಅಹುದು ಅಲ್ಲ ಎನ್ನದೆ ಸುಮ್ಮನಿರುವೆಯಲ್ಲಾ! ಹೇಳು: ನಾನು ಹೇಳಿದ ಮಾತು ನಿನ್ನ ಮನಸ್ಸಿಗೆ ಹಿಡಿಸಿತೊ? ಹಿಡಿಸಲಿಲ್ಲವೊ?"

ಅದಕ್ಕೆ ಆ ಅಮೃತವಾಚಕನೆಂಬ ಗಿಳಿ ಹೀಗೆ ಉತ್ತರ ಹೇಳಿತು:

"ಅಕ್ಕ, ನಿನ್ನ ನುಡಿ ನನ್ನ ಚಿತ್ತಕ್ಕೆ ರುಚಿಸದಿರುವುದೆ? ಅದನ್ನು ಕುರಿತು ಆಡುವುದಕ್ಕೆ ಈ ಹಕ್ಕಿಗೆ ಎಲ್ಲಿಂದ ಜಾಣತನ ಬರಬೇಕು! ಲೋಕದಲ್ಲಿ ಇತರ ಪುರುಷರ ನಡೆನುಡಿಗಳನ್ನು ಕಲಿಯುವುದು ಸಾಧ್ಯ. ಆದರೆ ನಿಮ್ಮ ಪುರುಷನ ನಡೆನುಡಿ, ನಿಮ್ಮ ನಡೆನುಡಿ ಇತರರಿಗೆ ಬರುವುದು ಶಕ್ಯವಿಲ್ಲ. ಆದ್ದರಿಂದ, ಸುಮ್ಮನೆ ನೀನು ಆಡಿದುದನ್ನು ಕೇಳುತ್ತಿದ್ದೆ, ಅಕ್ಕ. ಈಗ, ನೀನು ಹೇಳು ಎಂದರೆ ನನಗೆ ತಿಳಿದಷ್ಟು ಹೇಳುತ್ತೇನೆ.

"ಕೇಳಕ್ಕ, ಕುಸುಮಾಜಿ. ನೀನಾಡಿದ ನುಡಿಯೆಲ್ಲ ಅರಸನಿಗೆ ತಕ್ಕುದಾದದ್ದೇ. ಇದರಲ್ಲಿ ಮೋಸವಿಲ್ಲ. ರಾಜನಾದ ಅವನಿಗೆ ಸಮಾನರಿಲ್ಲ, ಅವನಿಗೆ ರಾಣಿಯರಾದ ನಿಮಗೂ ಸಮಾನರು ಇಲ್ಲ. ನಿಮ್ಮೊಡನೆ ಆಡಿ ಹಾಡುವ ನನಗೂ ಸಮಾನರಿಲ್ಲ.

"ಸಣ್ಣ ನಡುವಿನ ನೀವು ಆ ಭರತೇಶನ ತೋಳುಗಳಲ್ಲಿ ಹೊಂದಿರುವಾಗ, ಕಲ್ಪಲತೆಗಳು ಕಲ್ಪವೃಕ್ಷಕ್ಕೆ ಹಬ್ಬಿಕೊಂಡಂತೆ ಕಾಣುತ್ತದೆ, ಅಕ್ಕ. ಪುರುಷರಲ್ಲಿ ಅವನು ರತ್ನ, ಸ್ತ್ರೀಯರಲ್ಲಿ ನೀವು ರತ್ನಗಳು; ರತ್ನರತ್ನಗಳನ್ನು ಕೂಡಿಸಿ ಸರ ಮಾಡಿದ ಹಾಗಿದೆ, ನಿಮ್ಮ ಸರಸದಾಂಪತ್ಯ.

"ಅಧಮನಾದ ಪತಿ, ಉತ್ತಮಳಾದ ಸತಿ; ಉತ್ತಮನಾದ ಪತಿ, ಅಧಮಳಾದ ಸತಿ — ಎಂಬ ಅತಿವಿಕಾರಗಳು ಇತರ ಕಡೆ ಉಂಟು. ಆದರೆ ನಿಮ್ಮಂತೆ ಉತ್ತಮರಾದ ಸತಿಯರೂ ಉತ್ತಮನಾದ ಪತಿಯೂ ಸೇರಿರುವುದು ಮತ್ತೆಲ್ಲಿ? ಜಾಣೆ ಜಾಣನನ್ನು ಕೂಡಿದರೆ, ತಂತಿ ಕೂಡಿದ ವೀಣೆಯನ್ನು ನುಡಿಸಿದ ಹಾಗಿರುವುದು. ಜಾಣೆ ದಡ್ಡನನ್ನು ಕೂಡಿದರೆ, ವೀಣೆಗೆ ಹಗ್ಗ ಬಿಗಿದು ಮಿಡಿದ ಹಾಗಿರುವುದು.

"ಸಮವಾದ ರೂಪ, ಸಮವಾದ ಪ್ರಾಯ, ಸಮನಾದ ಗುಣದ ಗುಂಪು ಇವು ನಿಮಗೂ ನಿಮ್ಮ ರಮಣನಿಗೂ ಚೆನ್ನಾಗಿ ಹೊಂದಿಕೊಂಡಿದ್ದರಿಂದ ನಿಮಗೆ ಇಂತಹ ಅನ್ಯೋನ್ಯ ಉಂಟಾಯಿತು, ಅಕ್ಕ. ರೂಪದಿಂದ ನಿಮ್ಮನ್ನು ಸೋಲಿಸಿ, ಸರಸವಾದ ಆಟಪಾಟಗಳಿಂದ ನಿಮ್ಮನ್ನು ಮೆಚ್ಚಿಸಿ, ಅರಸನ ರೂಪಿನ ಈ ಮನ್ಮಥನು ನಿಮ್ಮ ಮನಸ್ಸನ್ನು ಸಂಪೂರ್ಣವಾಗಿ ಅಪಹಾರಮಾಡಿದ್ದಾನೆ.

"ನೋಡಿದರೆ — ಅರಸನ ರಾಣಿಯರಲ್ಲೆಲ್ಲಾ ನೀನೇ ಅವನಿಗೆ ತುಂಬ ಸೋತವಳಂತೆ ಕಾಣುತ್ತದೆ. ಅಲ್ಲವೆ ಹೋದರೆ, ಅರಸನನ್ನು ಹೀಗೆ ವರ್ಣಿಸುವ ಸೊಲ್ಲು ನಿನಗೆ ಎಲ್ಲಿಂದ ಬರಬೇಕು, ಅಕ್ಕ! ಮನಸ್ಸು ಮೆಚ್ಚಿದ ಕಡೆ ದೇಹ ಮೆಚ್ಚಾಗುವುದು. ಆದರಿಂದ ಮಾತು ಅನುಕೂಲವಾಗುವುದು. ಇಷ್ಟನಾದ ಅರಸನನ್ನು ನೀನು ಹೊಗಳಿದ್ದು ತುಂಬ ಒಳ್ಳೆಯದು. ಇಷ್ಟಕ್ಕೂ, ನೀನೇನು ಹೊಗಳೀಯೆ? ನಿನ್ನ ಪ್ರಿಯನ ಲಾಲನೆ ನಿನ್ನ ಬಾಯಿಂದ ಈ ಹೊಗಳಿಕೆಯನ್ನು ನುಡಿಸಿದೆಯಷ್ಟೆ. ನನ್ನ ಹೃದಯಕ್ಕೆ

ಆನಂದವನ್ನು ಉಂಟುಮಾಡಿದ ಪುರುಷನನ್ನು ಯಾವ ಹೆಂಡತಿ ವರ್ಣಿಸ ದಿರುವಳು !'

"ನಿನ್ನ ಮನಸ್ಸೆಲ್ಲಾ, ಆ ಭರತೇಶನಿಗೆ ಸೂರೆಹೋಗಿದೆ ಎಂಬುದನ್ನು ನಿನ್ನ ಮಾತೇ ಡಂಗುರ ಹಾಕುತ್ತಿದೆ. ಪತ್ನಿಯಾದವಳು ತನ್ನ ಪತಿಯ ಚರಿತವನ್ನು ಮೆಚ್ಚಿ ಕೊಂಡಾಡಿದರೆ, ಅದನ್ನು ಯಾರು ತಾನೆ ಮೆಚ್ಚ ದಿರುವರು!"

ಕುಸುಮಾಜಿ ಆ ಗಿಳಿಯ ಮಾತಿನ ವೈಖರಿಯನ್ನು ಕೇಳಿದಳು. "ಇದೇನೋ ಹೊಸದಾಗಿದೆ. ಇದು ಗಿಳಿಯಲ್ಲ" ಎಂದು ಆಲೋಚಿಸಿದಳು.

"ಹಕ್ಕಿಯಾದರೆ ಕಲಿಸಿದಷ್ಟನ್ನೇ ಹೇಳುತ್ತದೆ. ಆದರೆ ಈ ಗಿಳಿ ತಾನೇ ನನಗೆ ಹೊಸಕಲೆಯನ್ನು ಕಲಿಸುತ್ತಿದೆ. ಇದು ಖಂಡಿತ ಗಿಳಿಯಲ್ಲ. ಯಾವುದೋ ವ್ಯಂತರನೋ ದೇವತೆಯೋ ಇದರ ಮೈಯೊಳಗೆ ಸೇರಿಕೊಂಡು, ಹೀಗೆ ಮಾತನಾಡುತ್ತಿರಬೇಕು. ಅದೂ ಇದರ ಮಾತಿನ ರೀತಿ ನೋಡಿದರೆ, ಇದು ಪುರುಷರ ನುಡಿಯಲ್ಲ. ಯಾರೋ ಯುವತಿಯಿರಬೇಕು. ಇವಳು ಯಾರೆಂಬುದನ್ನು ವಿಚಾರಿಸೋಣ" ಎಂದು ಕುಸುಮಾಜಿ "ಹಕ್ಕಿಯೆ! ನಿನ್ನ ಈ ಮಾತು ಸತ್ಯವಾದರೂ ನಿನ್ನ ವೇಷ ಮೋಸವಾಗಿ ತೋರುತ್ತಿದೆ. ಆದ್ದರಿಂದ ಈ ಚಿಕ್ಕವೇಷವನ್ನು ತೊರೆದು, ದೊಡ್ಡವೇಷವನ್ನು ತಾಳಿ, ನನ್ನೊಡನೆ ಮಾತಾಡು" ಎಂದಳು.

ಅದಕ್ಕೆ ಹಕ್ಕಿ ನಗುತ್ತ, "ಚಿಕ್ಕವೇಷ ಚಿಕ್ಕಂದೇ ಹೋಯಿತು. ಕೇಳಕ್ಕ, ನನಗೆ ಇದೇ ದೊಡ್ಡವೇಷ. ಇದು ಮೋಸದ ವೇಷವಲ್ಲ, ಇದೇ ಸತ್ಯದ ವೇಷ'' ಎಂದಿತು.

ಅದಕ್ಕೆ ಕುಸುಮಾಜಿ "ಚದುರರ ಹತ್ತಿರ ನಿನ್ನ ಅತಿಚಾತುರ್ಯ ನಡೆಯುವುದಿಲ್ಲ. ನೀನು ಹೆಣ್ಣಲ್ಲವೆ? ನಿನ್ನ ನಿರ್ಮಲಾಕಾರವನ್ನು ನನಗೆ ತೋರು" ಎಂದಳು.

ಆಗ ತಟಕ್ಕನೆ, ಆ ಗಿಳಿಯ ಪಕ್ಕದಲ್ಲಿ ಅನುಪಮವಾದ ರತ್ನಾಭರಣ ಗಳನ್ನು ಧರಿಸಿದ ಕುಂಕುಮವರ್ಣದ ತುಂಬುಯೌವನದ ಪಂಕಜಮುಖಿ ಯೊಬ್ಬಳು ಕಾಣಿಸಿಕೊಂಡಳು. ಮರೆಸಿಕೊಂಡಿದ್ದ ತನ್ನ ಆಕಾರವನ್ನು ಆ ರಾಣಿ ತಿಳಿದುಬಿಟ್ಟ ಜಾಣತನಕ್ಕೆ ತುಂಬ ಮೆಚ್ಚಿಕೊಂಡಳು.

"ಹೆಣ್ಣೆ! ನೀನು ಯಾರು? ಇಲ್ಲಿಗೇಕೆ ಬಂದೆ?" ಎಂದಳು ಕುಸುಮಾಜಿ.

"ಚೆಲುವೆ, ಕೇಳು. ನಾನು ಒಬ್ಬ ವ್ಯಂತರ ಕನ್ಯೆ. ಬೆಟ್ಟದ ಕಾಡುಗಳಲ್ಲಿ ವಾಸನಾಗಿರುವವಳು. ಲೀಲೆಗಾಗಿ ಆಕಾಶದಲ್ಲಿ ಹೋಗುತ್ತಿದ್ದೆ. ನೀನು ಈ ಗಿಳಿಯೊಡನೆ ಲಲ್ಲೆ ಮಾತನಾಡುತ್ತಿದ್ದುದು ಕೇಳಿ, ಪ್ರೀತಿಯಾಗಿ ಬಂದೆ. ಈ ಗಿಳಿಯ ಮೈಯಲ್ಲಿ ನನ್ನ ರೂಪವನ್ನು ಮರೆಮಾಚಿ ನಿನ್ನೊಡನೆ ಮಾತನಾಡುತ್ತಿದ್ದೆ. ನೀನು ಆ ರಾಯನ ಅರ್ಧಾಂಗಿಯಾದರೂ ಆತನು ನಮಗೇನೂ ಅನ್ಯನಲ್ಲ. ಪರನಾರೀ ಸಹೋದರನಾದ ಭರತೇಶನು ವಾವೆಯಲ್ಲಿ ನನಗೆ ಅಣ್ಣನಾಗಬೇಕು. ಆದ್ದರಿಂದ ನೀನು ನನಗೆ ಅತ್ತಿಗೆ, ನಾನು ನಿನಗೆ ನಾದುನಿ. ಕೇಳು, ಅತ್ತಿಗೆ: ನನ್ನ ಅಣ್ಣಾಜಿಯಲ್ಲಿ ನೀನು ಚಿತ್ತವಿರಿಸಿದ್ದನ್ನು ಕಂಡು ನನಗೆ ತುಂಬ ಮೆಚ್ಚುಗೆಯಾಗಿದೆ. ನಾನು ನಿನಗೆ ಏನು ಕೊಡಲಿ? ನನ್ನ ಅಣ್ಣನಂಥವನನ್ನು ಪತಿಯಾಗಿ ಪಡೆದ ನಿನಗೆ ನಾನು ಏನು ತಾನೆ ಕೊಟ್ಟೇನು! ಆದರೂ ನಿನಗೆ ಏನಾದರೂ ಬೇಕಾದಾಗ ನನ್ನನ್ನು ನೆನೆ. ಬರುತ್ತೇನೆ" ಎಂದು ಆ ವ್ಯಂತರ ಕನ್ಯೆ ಮಾತನಾಡುತ್ತಿದ್ದ ಹಾಗೆಯೇ ಕಣ್ಮರೆಯಾಗಿ ಹೋದಳು.

ಕುಸುಮಾಜಿಗೆ ಆಶ್ಚರ್ಯವಾಯಿತು. ಅಕ್ಕಪಕ್ಕದ ದಿಕ್ಕು ನೋಡಿದಳು. ಇಷ್ಟು ನಕ್ಕಳು. "ಜಿನಸಿದ್ಧ!" ಎಂದಳು.

ಅಷ್ಟುಹೊತ್ತಿಗೆ ಹೆಣ್ಣುಮಕ್ಕಳು ಊಟಕ್ಕೆ ಬಂದರು. ಬಂದ ಅಕ್ಕತಂಗಿಯರಿಗೆ ಉಪಚಾರಮಾಡಿ, ಆಗತಾನೆ ನಡೆದ ಆಶ್ಚರ್ಯದ ವಾರ್ತೆಯನ್ನು ಒಂದುಚೂರೂ ನುಡಿಯದೆ, ಕುಸುಮಾಜಿ ಮರೆಮಾಚಿ, ಎಂದಿನ ಹಾಗೆಯೇ ಇದ್ದಳು.

ಈ ಕೃತಿಯನ್ನು ಅಮರಾಜಿ ಬರೆದಳು, ಕುಸುಮಾಜಿ ನುಡಿದಳು, ಸುಮನಾಜಿ ರಚಿಸಿದಳು. ಈ ಕೃತಿಯಲ್ಲಿ ತಪ್ಪಿದ್ದರೆ, ತಪ್ಪನ್ನು ತಿದ್ದುವುದು. ಒಪ್ಪವಾದರೆ ಲಾಲಿಸುವುದು. ತಪ್ಪು ಒಪ್ಪುಗಳು ನಮ್ಮವಲ್ಲ. ಜಿನನ ಪಾದಕ್ಕೆ ಒಪ್ಪಿಸಿದ ಈ ಕಾವ್ಯ ಸರ್ವಕಾಲಕ್ಕೂ ಒಪ್ಪುತಿರಲಿ.

೬

ಹೀಗೆಂಬುದಾಗಿ ನಾಂದಿಯನ್ನು ಓದಿ, ಆ ಗಾಯಕಿ ಸಂತೋಷದಿಂದ ಪುಸ್ತಕವನ್ನು ಕಟ್ಟಿದಳು.

ರಾಜನು ಮೃದುವಾದ ಮುಗುಳುನಗೆಯನ್ನು ಮುಖದಲ್ಲಿ ಆಡಿಸುತ್ತ, ತನ್ನಲ್ಲಿ ತಾನು ಹೀಗೆಂದುಕೊಳ್ಳುತ್ತಿದ್ದನು: "ಅವಳು ಅರಗಿಣಿಯೊಡನೆ ಏನೋ ಮಾತನ್ನಾಡಿದರೆ, ಅದನ್ನೇ ಹೊಂದಿಸಿಕೊಂಡು ಕವಿತೆಮಾಡಿದ ಈ ಇವರು ಅತಿನಿಪುಣೆಯರು. ತಮ್ಮತಮ್ಮಲ್ಲೇ ಮಾತನಾಡಿಕೊಂಡು ಚೆನ್ನಾಗಿ ಕೃತಿಮಾಡಿದರು. ಅಮರಾಜಿ ಸುಮನಾಜಿಯರ ಜಾಣತನವೇ ಜಾಣತನ!....ಕುಸುಮಾಜಿಯಾದರು ಕೂಡ ಗಿಳಿ ತನ್ನೊಡನೆ ಮಾತನಾಡಿದರೆ, ಆ ಗಿಳಿಯಲ್ಲಿ ಬಂದು ಸೇರಿದ್ದ ಸ್ತ್ರೀಯನ್ನು ಬರಿಯ ಸ್ವರಮಾತ್ರದಿಂದ ಹೇಗೆ ಕಂಡುಹಿಡಿದಳು! ಹೆಣ್ಣಾಗುವ ಹೊತ್ತಿಗೆ ಹಾಗೆ ಮಾತನಾಡಿಸಿ ನೋಡಿದಳಲ್ಲದೆ, ಗಂಡಾಗಿದ್ದಿದ್ದರೆ ಬೆಚ್ಚಿ ನೆರೆಮನೆಗೆ ಓಡಿಬಿಡುತ್ತಿದ್ದಳಲ್ಲವೆ! ಆದರೂ, ಏನೇ ಹೇಳು, ಆ ವ್ಯಂತರ ಕನ್ಯೆ ತನ್ನನ್ನು ಕೊಂಡಾಡಿದರೆ, ತನ್ನ ಮಂದಿರಕ್ಕೆ ಬಂದ ಇತರ ಜೊತೆಗಾತಿಯರಿಗೆ ಅದರ ಒಂದು ಅಕ್ಷರವನ್ನೂ ತಿಳಿಸದೆ, ತನ್ನ ಗುಟ್ಟನ್ನು ಕಾಪಾಡಿಕೊಂಡ ಈ ಗಂಭೀರಭಾವ ನನಗಂತೂ ತುಂಬ ಮೆಚ್ಚು....ಒಳ್ಳೆಯದು. ಲೀಲಾರ್ಥವಾಗಿ ಈ ಹೆಣ್ಣುಗಳು ಹವಣಿಸಿದ ಈ ಕಾವ್ಯವನ್ನು ತೂಗಿ ತೋರಿಸಿ, ಇವರಿಗೆ ಹಿರಿದಾದ ಮನ್ನಣೆಯನ್ನು ಮಾಡೋಣ".

ಹೀಗೆ ತನ್ನ ಮನಸ್ಸಿನಲ್ಲಿಯೇ ಆ ಕಾವ್ಯರಚನೆಯ ರೀತಿಯನ್ನು ಭಾವಿಸಿನೋಡಿ, "ಕೃತಿಯೇನೋ ಚೆನ್ನಾಯಿತು. ಆದರೆ ಇದರಲ್ಲಿ ಒಂದು ವಿಚಾರವುಂಟು. ಇದು ಸುಮನಾಜಿಯ ಕವಿತೆಯಲ್ಲ, ಇದು ಅಮರಾಜಿ ಹದವಾಡಿ ಹೇಳಿದ ಕೃತಿ" ಎಂದನು.

ಆ ಮಾತು ಕೇಳಿ, ಅಮರಾಜಿ ಸುಮನಾಜಿಯರು ನಕ್ಕು, ಒಬ್ಬರೊಬ್ಬರ ಮುಖ ನೋಡಿಕೊಂಡರು.

"ಆಗಲೇ ನಾನು ಹೇಳಿದೆ, ಅಕ್ಕ - ನೀನು ನನ್ನಮೇಲೆ ಈ ಗುಟ್ಟನ್ನು ಹೊರಿಸಬೇಡ, ಎಂದು. ಈಗ ಆಯಿತೆ!" ಎಂದಳು ಸುಮನಾಜಿ, ನಗುತ್ತ. "ತಂಗಿ, ನೀನು ಇದನ್ನು ಕೃತಿಮಾಡು, ಎಂದಳು. ಕಾವ್ಯದ ರೀತಿ ನನಗೆ

ಬರಿಸು, ಎಂದು ನಾನು ಹೇಳಿದೆ. ಅದಕ್ಕೆ ಅನುರಾಜಿ ತಾನೇ ಅದನ್ನು ಸಂಗತಿಮಾಡಿದಳು. ನಾನು ಅದನ್ನು ಅಂಗೀಕರಿಸಿ ಬರೆದೆ. ನಾನು ಹೇಳಿದೆ ಎಂಬುದು ಏಕೆ, ನಿನ್ನ ಹೆಸರೇ ಇಲ್ಲಿ ಇರಲಿ, ಎಂದೆ. ಆದರೆ ತಾನು ಅದನ್ನು ಕೇಳದೆ, ಮರೆಸಿ ಹೇಳಿದಳು. ಹೇಳು ಹೇಳು, ನೀನು ಯಾರಿಗೆ ಇದನ್ನು ಮರೆಮಾಡಿದರೂ ಅರಸನ ಮನಸ್ಸಿಗೆ ಇದು ಮರೆಯಾಗಲಾರದು; ಎಲ್ಲರ ಮನಸ್ಸಿನ ಓರೆಕೋರೆಗಳನ್ನೂ ಆತ ಬಲ್ಲ, ಎಂದು ನಾನು ಮೊದಲೇ ಹೇಳಿದೆ" ಎಂದಳು.

ಅರಸ ನಗುತ್ತ ಹೇಳಿದ: "ಬಲ್ಲೆ, ಬಲ್ಲೆ, ಸುಮನಾಜಿ. ಮೊದಲ ಅರ್ಧ ಅವಳ ಕವಿತ್ವ, ಕಡೆಯ ಅರ್ಧ ನಿನ್ನ ಕವಿತ್ವ."

"ಹೌದು, ಅದು ನಿಜ. ತಾಯಿ, ನೀನು ಹೇಳೇ ಎಂದರೆ–ಒಲ್ಲೆ ಎಂದಳು. ಅದಕ್ಕೆ ನಾನೊಂದು ಉಪಾಯಮಾಡಿ, ಒಯ್ಯಾರದಿಂದ ನಾನು ಹೇಳಲು ಮೊದಲುಮಾಡಿದರೆ, ಬಳಿಕ ತಾನೂ ಹೇಳತೊಡಗಿದಳು. ಆದಿ ಮಂಗಲ ನನ್ನದು, ಅಂತ್ಯಮಂಗಲ ಆಕೆಯದು. ತಾವು ಇದರ ಗುಟ್ಟನ್ನು ಒಡೆದು ಕಂಡದ್ದರಲ್ಲಿ ಏನೂ ಆಶ್ಚರ್ಯವಿಲ್ಲ" ಎಂದು ಅನುರಾಜಿ ಹೇಳಿ, ಸುಮನಾಜಿಯನ್ನು ಕುರಿತು, "ನೋಡಿದೆಯಾ, ಅಕ್ಕ. ನಮ್ಮ ರಾಯನನ್ನು ಜಯಿಸಲು ನಮಗೆಲ್ಲಿ ಸಾಧ್ಯ! ನಮ್ಮ ಅಂತರಂಗದ ಸುಕ್ಕುಸುಳುಹುಗಳೆಲ್ಲ ಈತನ ಕೈಗೆ ಸಿಕ್ಕಿಬಿದ್ದುಹೋದಾವೆ!" ಎಂದಳು.

"ನಿಮ್ಮ ಕಾವ್ಯ ಲೇಸಾಯಿತು. ನಿಮ್ಮ ಕವಿತ್ವದ ಅಭ್ಯಾಸ ಚೆನ್ನಾಗಿದೆ. ಈ ಸತ್ಕಥೆಗೆ ನಾನು ಮೆಚ್ಚಿದೆ. ನಿಮಗೇನು ಬೇಕೋ ಕೇಳಿ; ಕೊಡುತ್ತೇನೆ."

"ಮೆಚ್ಚಿಸಿ ಯಾವುದಾದರೂ ವಸ್ತುವನ್ನು ಪಡೆಯಬೇಕೆಂದು ಹೇಳಿದ ಕೃತಿಯಲ್ಲ ಇದು. ನಮಗೇನೂ ಬಯಕೆಯಿಲ್ಲ. ಆ ಮೆಚ್ಚು ಅಲ್ಲೆ ಇರಲಿ."

"ಹಾಗೇ ಆಗಲಿ. ಭಂಡಾರದಲ್ಲೆ ಇರಲಿ. ಮುಂದೆ ನೀವು ಕೇಳಿದಾಗಲೇ ಕೊಡೋಣ. ಈಗ ನಾನು ಇಕ್ಕಿರುವ ಈ ಆಭರಣವನ್ನು ತೆಗೆದು ಕೊಡುತ್ತೇನೆ."

"ಆಭರಣಗಳಿಗೆ ನಮಗೇನೂ ಕೊರತೆಯಿಲ್ಲ ಈಗ. ವಿಶೇಷವಾಗಿವೆ. ಇನ್ನು ಅದರ ಮಾತು ಬೇಡ, ಅರಸ."

" ನಿಮ್ಮ ಆಭರಣ ಇದ್ದರೆ ಇರಲೇಳಿ. ನನ್ನ ಆಭರಣವನ್ನು ಕೊಡುತ್ತೇನೆ. ಬನ್ನಿ" ಎಂದು ಭರತನು ಅವರನ್ನು ಕರೆಯುತ್ತ, ತನ್ನ ಮೈಮೇಲಿನ ಭೂಷಣಗಳಿಗೆ ಕೈಹಾಕಿದನು.

" ಬೇಡವೆಂದರೂ ಈ ರಾಯ ಬಲವಂತ ಮಾಡಿಕೊಡುತ್ತಿದ್ದಾನೆ. ಇವಕ್ಕೆ ನಾವು ಮಾಡುತ್ತೇವೆ, ತಾಳು " ಎಂದುಕೊಂಡು ಅವರಿಬ್ಬರೂ ಎದ್ದು, ಜೊತೆಯ ಸತಿಯರಿಗೆ ಏನೋ ಸೂಚನೆ ಮಾಡಿದರು. ಕೂಡಲೆ ಎಲ್ಲರೂ ಎದ್ದು, ಅರಸನ ಎದುರಿಗೆ ಸಾಷ್ಟಾಂಗವಾಗಿ ನಮಸ್ಕರಿಸಿದರು. ದೊಡ್ಡ ಗಾಳಿ ಬೀಸಿದರೆ, ಮರದಿಂದ ನೆಲಕ್ಕೆ ಬಿದ್ದ ಎಳಲತೆಗಳೋ ಎಂಬ ರೀತಿಯಾಗಿ ಆ ಲತಾಂಗಿಯರು ಅಲ್ಲಿ ಮೈನೀಡಿ ಎರಗಿದರು.

ಅರಸನು ಅದನ್ನು ಕಂಡು, ನಗುತ್ತ, " ಇದೇನಿದು ? ಇವರೆಲ್ಲರೂ ಏಕೆ ಹೀಗೆ ಸಾಲುಸಾಲಾಗಿ ಸಾಷ್ಟಾಂಗ ಮಾಡಿದರು ? " ಎಂದು ಪಂಡಿತೆಯನ್ನು ಕೇಳಿದನು.

ಪಂಡಿತೆ, ಆ ರಾಣಿಯರ **ಅಂತರಂಗವನ್ನು** ಅರಿತವಳು ಹೇಳಿದಳು : " ಅರಸೆ, ನೀನು ಆಭರಣವನ್ನು ತೆಗೆದುಕೊಡುವೆನೆಂದದ್ದು ಈ ಸತಿಯರಿಗೆ ರುಚಿಯಾಗಲಿಲ್ಲ. ಪತಿಯ ಅಲಂಕಾರವನ್ನು ಹಾಳುಮಾಡುವುದಕ್ಕೆ ಈ ಪತಿಭಕ್ತೆಯರಿಗೆ ಮನಸ್ಸು ಬಾರದು. ನಿನ್ನ ಶೃಂಗಾರ ಅವರ ಕಣ್ಣಿನ ಅರ್ತಿ. ನಿನ್ನ ರತ್ನದ ಆಭರಣಗಳನ್ನು ತೆಗೆಸಿ ಭಿನ್ನಮಾಡಿ ನೋಡುವ ಮೊದಲೇ, ತಾವು ಹೀಗೆ ಮುಖ ಅಡಿಯಾಗಿ ಮುಂದೆ ಎರಗಿದರು. ಒಲ್ಲೆವೆಂದರೂ ಬೇಡವೆಂದರೂ ನೀನು ಬಲವಂತಮಾಡಿ ಕರೆಯುವಾಗ, ಒಡೆಯನಿಗೆ ಎದುರು ಉತ್ತರ ಕೊಡಲಾಗದು ಎಂದು ಇವರೆಲ್ಲ ಹೀಗೆ ಎರಗಿದರು, ದೊರೆಯೆ."

" ಅದು ಸರಿ. ಆದರೆ, ನಾನು ಇಬ್ಬರನ್ನು ಮಾತ್ರ ಕರೆದರೆ, ಈ ಎಲ್ಲರೂ ಹೀಗೆ ಅಡ್ಡಬಿದ್ದದ್ದೇಕೆ ?

" ಇವರಲ್ಲಿ ಒಬ್ಬರೊಬ್ಬರಿಗೆ ಭೇದವಿಲ್ಲ. ಇವರ ಸ್ನೇಹ ಹೀಗೆ ಹಬ್ಬಿ ಒಂದಾಗಿದೆ, ಅರಸೆ. ಇದೇನು ನಿನಗೆ ಗೊತ್ತಿಲ್ಲದ್ದೆ ! ಸುಮ್ಮನೆ ತಿಳಿಯದಂತೆ ನನ್ನನ್ನು ಕೇಳುತ್ತೀಯೆ. ಸಾಕು, ಸಾಕು. ನಮ್ಮ ದೇವಿಯರು

ಅಡ್ಡಬಿದ್ದು ಆಗಲೇ ಹೊತ್ತಾಯಿತು. ಪರಾಕು ಬೇಡ, ಇನ್ನು ಏಳಿ, ಎಂದು ಹೇಳು."

ರಾಜನು ಅದಕ್ಕೆ ಹೇಳಿದ: "ಏಳಿ, ಏಳಿ. ಬಳಲಿದ್ದೀರಿ."

ಬಾಲೆಯರೆಲ್ಲ ಎದ್ದರು. ಪ್ರಸನ್ನಮುಖದಿಂದ ನಿಂತರು. "ಇವತ್ತು ನೀನು ಏನು ಕೊಟ್ಟರೂ ನಾವು ತೆಗೆದುಕೊಳ್ಳುವುದಿಲ್ಲ. ಇದು ವ್ರತ" ಎಂದರು.

ರಾಜನು ಆಲೋಚಿಸಿದ: "ನನಗೆ ಇವರ ಮೇಲೆ ಪ್ರೀತಿಯಾಗಿದೆ. ನಾನೇನು ಕೊಡುವೆನೆಂದರೂ ಬೇಡವೆನ್ನುತ್ತಾರೆ. ಕೊಟ್ಟ ಹೊರತು ನನ್ನ ಬಯಕೆ ತೀರುವಂತಿಲ್ಲ. ಇವಕ್ಕೇನು ಮಾಡೋಣ?....ಬಂಗಾರ ಬೇಡದೆ ಹೋದರೆ ಹೋಗಲಿ. ಇವರನ್ನು ಆಲಿಂಗಿಸಿಯಾದರೂ ಬಿಡೋಣವೆಂದರೆ, ಇವರನ್ನು ಒತ್ತಿಗೆ ಬರಮಾಡಿಕೊಳ್ಳುವ ಉಪಾಯವೇನು?"

ಒಂದು ಉಪಾಯ ತೋಚಿತು. "ಬಾ, ಅನುರೆ. ಬಾ, ಸುಮನೆ. ಗುಟ್ಟಾಗಿ ಹೇಳುತ್ತೇನೆ. ಬನ್ನಿ" ಎಂದು ಕರೆದ. ನಡೆದು ಹತ್ತಿರ ಬಂದ ಆ ಇಬ್ಬರು ಹೆಣ್ಣುಗಳನ್ನೂ ಎಡಗಡೆ ಬಲಗಡೆ ನಿಲ್ಲಿಸಿಕೊಂಡು, ನುಡಿಯುವ ಹಾಗೆ ಕಿವಿಯ ಹತ್ತಿರ ಮುಖತರುತ್ತಾ, ಇಬ್ಬರನ್ನೂ ಒಟ್ಟಿಗೆ ಅಪ್ಪಿಕೊಂಡು ಬಿಟ್ಟ. ಇಬ್ಬರೂ ಬೆದರಿದರು. ಬಿಡಿಸಿಕೊಳ್ಳಲು ಅತ್ತಿತ್ತ ವ್ಯೈಯೊದರಿದರು. ರಾಜನು ಮುದ್ದುಮಾತನಾಡುತ್ತ, ಕದಲದ ಹಾಗೆ ಅವರನ್ನು ಬಿಗಿದಪ್ಪಿ, "ಈಗಲೀಗ ಮೆಚ್ಚಿದೆ!" ಎಂದು ಅವರನ್ನು ಬಿಟ್ಟ.

ಸತಿಯರೆಲ್ಲರೂ ಘೊಳ್ಳನೆ ನಕ್ಕರು. ರಾಯ ತಾನೂ ನಸುನಕ್ಕ. "ಒಳ್ಳೆಯದು. ಹಾಗೇ ಆಗಬೇಕು!" ಎಂದು ಕುಸುಮಾಜಿ ಉಬ್ಬಿ ಗುಳುಗುಳು ನಕ್ಕಳು.

"ಕೋಣೆಯಲ್ಲಿ ನಾನೇನೋ ಒಂದನ್ನು ನುಡಿದಾಡಿದರೆ, ಅದನ್ನು ತಂದು ಅರಸನ ಎದುರಿಗೆ ಆಡಿದಿರಲ್ಲಾ! ದೈವ ಅದರ ಫಲವನ್ನು ನಿಮಗೀಗ ಕಣ್ಣಾರೆ ಕಾಣಿಸಿತು. ಅವರಿವರ ಗುಟ್ಟಿನ ಚರಿತ್ರವನ್ನು ಲೋಕಕ್ಕೆ ಹಬ್ಬಿಸಿ ನಗೋಣ ಎಂಬುವರನ್ನು ದೈವವೇ ತಬ್ಬಿ ನಗಿಸುವುದು ಎಂಬ ನುಡಿಗೆ ನೀವೇ ಗುರಿಯಾದಿರಿ, ಅಕ್ಕ!" ಎಂದಳು. ಮುಖಕ್ಕೆ ಸೆರಗು ಮರೆಮಾಡಿ ಕೊಂಡು ನಗುವಳು. ಕಂಬದ ಮರೆಗೆ ಹೋಗುವಳು. ಒಡನೆ ಮರೆ

ಯಿಂದ ಹೊರಗೆ ಬರುವಳು. ಗಂಡನ ಎದುರಿಗೆ ನಾಚುತ್ತ ನಗುತ್ತ ನಲಿದಾಡುವಳು.

ಅರಸ ಕಿಗ್ಗಣ್ಣಿನಿಂದ ನೋಡಿಯೂ ನೋಡದವನಂತೆ ಆಕೆಯ ಸರಸ ಲೀಲೆಯನ್ನು ಕಂಡು ಆನಂದಿಸಿದ. 'ತಲೆಬಾಗಿ ಕುಳಿತಿದ್ದವಳಿಗೆ ಈಗ ಸುಮ್ಮಾನ ಬಂತು' – ಎಂದು ಸಂತೋಷಪಟ್ಟ.

ಅಮರಾಜಿ ಸುಮನಾಜಿಯರು ಮುಂದೆ ಬಂದರು. ಅರಸನಿಗೆ ತಲೆಬಾಗಿ ನಮಿಸಿದರು. ಕಟಾಕ್ಷದಿಂದ ನೋಡುತ್ತ, ಲಜ್ಜೆಯಿಂದ ಕೇಳಿದರು:

"ದೊರೆಯೆ! ಸುತ್ತ ಜನ ಸೇರಿರುವಾಗ ಹೀಗೆ ಮಾಡಬಹುದೆ?"

ದೊರೆ ಹೇಳಿದ: "ಇಲ್ಲಿ ಬೇರೆ ಜನ ಯಾರು? ಇರುವವರು ನನ್ನ ಸೇವೆಯ ಸ್ತ್ರೀಯರು, ನನ್ನ ರಾಣಿಯರು. ಇರುವವರೆಲ್ಲ ಹೆಂಗಸರು, ನಾನು ಒಬ್ಬ ಮಾತ್ರ ಪುರುಷ. ಇಲ್ಲಿ ನಿಮಗೆ ಏಕೆ ನಾಚಿಕೆ? ಒಪ್ಪವಾದ ಒಂದು ಕಾವ್ಯಕ್ಕೆ ನಾನು ಮೆಚ್ಚಿ, ಕರೆದುಕೊಂಡು ಅಪ್ಪಿದರೆ, ಅದರಲ್ಲಿ ಏನು ದೋಷ? ನನ್ನ ಹೆಂಡಿರನ್ನು ನಾನು ಅಪ್ಪಲಾಗದೇನು? ಇದು ತಪ್ಪಿದ ಕಾರ್ಯವೆ?"

"ಕುಸುಮಾಜಿಗೆ ಒಂದು ತಂತ್ರವನ್ನು ಹೇಳುತ್ತೇನೆ – ಎಂದು ನಮ್ಮನ್ನು ಸುಳ್ಳುಸುಳ್ಳೇ ಕರೆದುದೇಕೆ?"

"ಅದು ಹೇಗೆ ಸುಳ್ಳು? ನಾನು ಮಾಡಿದ ತಂತ್ರದಿಂದ ಕುಸುಮಾಜಿ ನಕ್ಕಳಲ್ಲವೆ, ನೋಡಿ!"

"ಅಬ್ಬಾ! ಈ ಅರಸನನ್ನು ಮಾತಿನಲ್ಲಿ ನಾವು ಗೆಲ್ಲುವುದು ಸಾಧ್ಯವಿಲ್ಲ" ಎಂದು ಅವರು ಇಬ್ಬರೂ ಅರಸನ ಗದ್ದುಗೆಯಿಂದ ಆಚೆ ತಿರುಗಿ, ಕುಸುಮಾಜಿಯ ಬಳಿಗೆ ಬಂದರು.

ಅವಳನ್ನು ಕುರಿತು, "ತಂಗಿ, ನೀನು ಆಡಿದ ಮಾತು ಸರಿಯಾಯ್ತು. ನಿನ್ನನ್ನು ನಾವು ಸ್ತುತಿಮಾಡಿದರೆ, ನೋಡಿದೆಯಾ, ನಮಗೆ ಫಲ ಕೂಡಲೆ ಕಾಣಿಸಿತು!" ಎಂದರು.

"ಹೌದು. ನಾನು ಯಾವ ಗುಣಜ್ಞೆಯೆಂದು ನೀವು ನನ್ನನ್ನು ಉತ್ಸಾಹದಿಂದ ಕೀರ್ತಿಸಬೇಕು! ಬಹು ಗುಣವುಳ್ಳವರು ಸ್ವಲ್ಪ ಗುಣವುಳ್ಳವರನ್ನು ಕೊಂಡಾಡಬಹುದೆ?" ಎಂದಳು, ಕುಸುಮಾಜಿ.

“ ವಿನೋದಕ್ಕೆ ಹೇಳಿದೆವು, ತಂಗಿ. ನೊಂದುಕೊಳ್ಳಬೇಡ ” ಎಂದರು ಅವರು. “ ನಾನೂ ವಿನೋದಕ್ಕೆ ಹೇಳಿದೆ, ಅಕ್ಕ ” ಎಂದಳು ಅವಳು.

“ ಸಾಕು, ಸಾಕು. ಹೆಂಗಸರಿಗೆ ಎಷ್ಟು ಮಾತು? ಸೌಜನ್ಯದ ಪುರುಷ ಹೇಗೆ ಹೇಳಿದರೆ, ಕೈಹಿಡಿದ ಹೆಣ್ಣು ಹಾಗೆ ಕೇಳಬೇಕು. ಪತಿಯರಿಗೆ ಸತಿಯರು ಸೂಜಿಯ ಹಿಂದಿನ ನೂಲಿನಂತೆ ಇರುವುದಲ್ಲವೆ ಕ್ರಮ? ಸ್ವಾಮಿಯ ಮನಸ್ಸಿಗೆ ಏನು ಮೆಚ್ಚೋ ನಮಗೂ ಅದೇ ಮೆಚ್ಚು ” ಎಂದು ಉಳಿದ ಅರಸಿಯರು ಅವರ ಮಾತನ್ನು ಮುಗಿಸಿದರು.

“ ಬೆಳಗಿನ ಸಭೆ ಮುಗಿಯಿತು. ಹೊಸ ಕಾವ್ಯವನ್ನು ಕೇಳಿಯಾಯಿತು. ಏಳಿ, ಅರಸನಿಗೆ ಇನ್ನು ನಿವಾಳಿಯಿಟ್ಟು ದೃಷ್ಟಿ ತೆಗೆಯೋಣ ” ಎಂದುಕೊಂಡು ಆ ರಾಣಿಯರು ಒಬ್ಬೊಬ್ಬರೂ ಒಂದೊಂದೆ ಆಭರಣವನ್ನು ತೆಗೆದು ನಿವಾಳಿಸಿ ಹಾಕಿದರು ಅದೇ ಒಂದು ಬೆಟ್ಟದಷ್ಟು ರಾಶಿಯಾಯಿತು. ಆ ರಾಶಿಯನ್ನು ಅಲ್ಲಿನ ಸೇವೆಯ ಹೆಣ್ಣುಗಳು ಹೊರೆಕಟ್ಟಿ ಹೊತ್ತುಕೊಂಡು ಹೋದರು.

೭

“ ಮಮತೆಯಿಂದ ಎಲ್ಲರೂ ಒಟ್ಟಿಗೆ ಸೇರಿ ಸಂಭ್ರಮದಿಂದ ನಿವಾಳಿಸಿದಿರಲ್ಲ. ಅಮರೆ ಸುಮನೆ ಕುಸುಮೆ ಇವರ ಜಗಳ ಎಲ್ಲಿಗೆ ಓಡಿಹೋಯಿತು? ಈಗ ತಾನೆ ಶತ್ರುಭಾವದಿಂದ ಹೋರಾಡಿದರು. ಆಗಲೇ ಮಿತ್ರಭಾವದಿಂದ ಒಡಗೂಡಿ ಒಂದಾದರು. ಇದೇನು ವಿಚಿತ್ರ! ಹೇಳುವೆಯ, ಪಂಡಿತೆ? ” ಎಂದ ರಾಜ.

“ ಸುಮನಾಜಿಯಲ್ಲಿ ಕುಸುಮಾಜಿಯಲ್ಲಿ ನೋವು ಉಂಟಾಗದು, ಅರಸೆ! ” ಎಂದಳು ಪಂಡಿತೆ.

ಸುಮನ ಎಂದರೆ ಹೂ, ಕುಸುಮ ಎಂದರೆ ಹೂ, ಆಜಿ ಎಂದರೆ ಯುದ್ಧ – ಎಂಬುದನ್ನು ತಿಳಿದ ಅರಸನು “ ಹೌದು, ಹೌದು, ಪಂಡಿತೆ. ಖಡ್ಗದ ಆಜಿಯಲ್ಲಿ ನೋವಾಗುವುದಲ್ಲದೆ ಹೂವಿನ ಆಜಿಯಲ್ಲಿ ಆಗದು! ” ಎಂದನು.

ಪಂಡಿತೆ ಮತ್ತೆ ಹೇಳಿದಳು: "ಅಸುರಾಜಿಯಲ್ಲಿ ಕರ್ಕಶವುಂಟು. ಅಮರಾಜಿಯಲ್ಲಿ ಕರ್ಕಶವಾಗದು, ಅರಸೆ."

ಅಸುರ ಎಂದರೆ ರಾಕ್ಷಸ, ಅಮರ ಎಂದರೆ ದೇವತೆ, ಆಜಿ ಎಂದರೆ ಯುದ್ಧ ಎಂಬುದನ್ನು ತಿಳಿದ ಅರಸು "ಹೌದು ಹೌದು, ಪಂಡಿತೆ. ದೇವತೆಗಳಿಗೆ ಕದನವಿಲ್ಲ. ಒಂದುವೇಳೆ ಆದರೂ, ಅದು ಬಹು ಮೃದು" ಎಂದು ಅವಳ ಜಾಣ್ಮೆಗೆ ಮೆಚ್ಚಿ, ಅವಳಿಗೆ ಚಿನ್ನದ ಭೂಷಣಗಳನ್ನು ಕೊಟ್ಟನು.

ಅಮರಾಜಿ ಸುಮನಾಜಿ ಕುಸುಮಾಜಿಯರು ತಾವೂ ಪಂಡಿತೆಗೆ ಉಚಿತವಾದ ಮೆಚ್ಚುಗಳನ್ನು ಕೊಟ್ಟು ಮನ್ನಿಸಿದರು. "ಈ ಗುಣವತಿಯರಾದ ಹೆಂಡಿರ ಕೂಡೆ ಪುರುಷೋತ್ತಮನಾದ ನೀನು ಭೋಗಸಾಮ್ರಾಜ್ಯವನ್ನು ಆಳು" ಎಂದು ಪಂಡಿತೆ ಹಾರೈಸಿ, ತನ್ನ ಸ್ಥಾನಕ್ಕೆ ಹೋದಳು.

ಅರಸನು ಹಾಗೇ ಆ ರಾಣಿಯರೆಲ್ಲರನ್ನೂ ನೋಡಿದ. ಬಳಿಕ ಅವನಿಗೆ ಏನೆನ್ನಿಸಿತೋ – ಪಂಡಿತೆಯನ್ನು ಕುರಿತು "ಪಂಡಿತೆ! ನಾವು ನಮ್ಮ ಮನೆಯಲ್ಲಿದ್ದ ಅನ್ನವನ್ನು ಉಂಡರೆ ಒಳ್ಳೆಯದೊ? ಅಥವಾ ನಮ್ಮ ಹೆಂಡಿರಲ್ಲಿ ಒಬ್ಬಳ ಮನೆಗೆ ಹೋಗುವುದು ಒಳ್ಳೆಯದೊ? ನೀನು ಕಂಡಂತೆ ಹೇಳು" ಎಂದನು.

ಪಂಡಿತೆ ಎಷ್ಟಾದರೂ ಇಂಥದರಲ್ಲಿ ಪಂಡಿತೆ. "ಅರಸನ ಮನಸ್ಸು ಕುಸುಮಾಜಿಯ ಕಡೆಗೆ ಎರಗಿತು" ಎಂಬುದನ್ನು ತಿಳಿದಳು. ಆದರೂ ತಿಳಿಯದವಳ ಹಾಗೆ "ಈ ದಿನದ ಊಟ ತಮಗೆ ತಮ್ಮ ಮನೆಯಲ್ಲಿ ಆಗುವುದು ಚೆಂದವಲ್ಲ. ಒಬ್ಬಳ ಮನೆಗೆ ಸಂದರೆ ಉತ್ತಮ" ಎಂದಳು.

ಅರಸನಿಗೆ ಮನಸ್ಸಿನ ಗಂಡೆಯನ್ನು ತುರಿಸಿದಹಾಗಾಯಿತು. "ಹಾಗಾದರೆ, ಯಾವಳ ಮನೆಗೆ ಹೋಗಬಹುದು, ಹೇಳು" ಎಂದ.

"ಆಲೋಚಿಸಿಕೊಂಡು ವಿಜ್ಞಾಪಿಸುತ್ತೇನೆ" ಎಂದು ಆ ಪಂಡಿತೆ ಕಪಟವಾದ ಮೌನವನ್ನು ಧರಿಸಿ, ಮೂಗಿನ ಮೇಲೆ ಬೆರಳಿಟ್ಟು, ಕಣ್ಣು ಮುಚ್ಚಿ, ತಲೆಯನ್ನು ಒಂದಷ್ಟು ತೂಗಾಡಿ, ಯೋಗಿಗಳ ಹಾಗೆ ಧ್ಯಾನಿಸಿ ಕಣ್ತೆರೆದು, "ಒಡೆಯನೆ, ಈ ದಿನ ತಾವು ಕುಸುಮಾಜಿಯರ ಮನೆಗೆ ನಡೆದರೆ ಉತ್ತಮ!" ಎಂದಳು. "ಈ ದಿನ ನಾವು ಕೇಳಿದ ಹೊಸಕಾವ್ಯ ಮೂವರಿಂದ ಆದುದು. ಇಬ್ಬರನ್ನು ಈಗತಾನೆ ಮನ್ನಣೆ ಮಾಡಿರುವೆ. ಇನ್ನೊಬ್ಬಳಿಗೆ

ಇನ್ನೂ ಇಲ್ಲ. ಅವಳ ಮನೆಗೆ ಹೋಗಿ ಅವಳನ್ನು ಮನ್ನಿಸುವುದು ಉಚಿತ'' ಎಂದಳು.

"ಹೌದು. ಅದೇ ಸರಿ. ಹಾಗೇ ಆಗಬೇಕು'' ಎಂದರು, ಇತರ ರಾಣಿಯರು.

ಅರಸನಿಗೋ ಎದೆಯಲ್ಲಿ ಆನಂದ. ಮುಖದಲ್ಲಿ ಮಾತ್ರ ವಿಕಾರವಿಲ್ಲ.

"ಅಮ್ಮ! ರಾಯನಿಗೆ ಇಂದು ನಿನ್ನ ಮನೆಯಲ್ಲಿ ಸನ್ಮಾನ. ಹೋಗು, ಬೇಗ ಹೋಗಿ, ಸಿದ್ಧಮಾಡಿಕೊ!'' ಎಂದಳು ಪಂಡಿತೆ, ಆ ಎಲ್ಲ ಹೆಣ್ಣು ಮಕ್ಕಳ ಎದುರಿಗೆ.

ಆ ಸವತಿಯರ ಎದುರಿಗೆ ಕುಸುಮಾಜಿ ನಾಚಿದಳು. ಆ ಸವತಿಯರೋ, ಅನರು ಜಾಣೆಯರು. ಅವರಿಗೂ ಆ ತಂತ್ರ ಗೊತ್ತು. ಆದರೂ ಅದನ್ನು ಒಡೆದು ಹೇಳದೆ, "ತಂಗಿ! ಹೋಗಕ್ಕ, ಹೋಗು. ಗಂಡನ ಭೋಜನಕ್ಕೆ ಎಡೆಮಾಡುವುದು ಹೆಂಡತಿಯ ಭಾಗ್ಯ. ಅದು ನಿನ್ನ ಪಾಲಿಗೆ ಬಂದದ್ದು ನಮ್ಮ ಭಾಗ್ಯ'' ಎಂದು ಹೇಳಿಕಳಿಸಿದರು.

ಕುಸುಮಾಜಿ ಹೊರಡಲು ಅನುವಾದಳು. ಕಾವಲುಕೋಲನ್ನು ಹಿಡಿದ ಸೇವಕಿಯರು ಪರಾಕು ಹೇಳಿದರು :

"ಗಗನದಲ್ಲಿ ಹೋಗುತ್ತಿದ್ದ ವ್ಯಂತರಿಯನ್ನು ತನ್ನ ಮಾತಿನ ಜಾಣ್ಮೆಯಿಂದ ತಿರುಗಿಸಿ, ಗಿಳಿಯ ಮೈಯಲ್ಲಿ ಅಡಗಿದ್ದವಳನ್ನು ನುಡಿಸಿದ ವಳೆ, ಬಾ. ಸ್ವರಮಾತ್ರದಿಂದ ಆ ಗಿಳಿಯ ಮೈಯೊಳಗಿದ್ದವಳನ್ನು ಗುರುತು ಹಿಡಿದು, ಅವಳನ್ನು ಪ್ರತ್ಯಕ್ಷನಾಗಿ ಕಂಡ ಹೆಂಡಿರ ಚೂಡಾಮಣಿಯೆ, ಬಾ. ಆ ವ್ಯಂತರ ಕಾಮಿನಿಯಿಂದ ಕೊಂಡಾಡಿಸಿಕೊಂಡರೂ ಹೆಮ್ಮೆಯಿಂದ ಉಬ್ಬಿ ಹೋಗದ ಅತ್ಯಂತಗಂಭೀರೆ, ಬಾ. ಭರತಚಕ್ರೇಶನ ಮನಸ್ಸನ್ನು ಅಲ್ಹಾದಿಸಿದ ಅರಸಿಯೆ, ಬಾ. ಶೃಂಗಾರವೃಕ್ಷದ ಕಳಿತ ಹಣ್ಣಿನಂತಿರುವ ಈ ಹೆಣ್ಣನ್ನು ಮುಂದೆ ಮನೆಗೆ ಕಳುಹು, ದೊರೆಯೆ. ಹಣ್ಣಿನ ಬಳಿಗೆ ಹಕ್ಕಿ ಹೋಗುವಂತೆ ನೀನು ಹಿಂದೆ ಹೋಗಿ, ಅವಳ ಮನೆಯಲ್ಲಿ ಭೋಜನಮಾಡು.''

ಅರಸನು ಅವರ ಪರಾಕಿಗೆ ಸಂತೋಷಪಟ್ಟು, ಅವರಿಗೆ ಚಿನ್ನದ ತೊಡಿಗೆಗಳನ್ನು ಕೊಟ್ಟು ಮನ್ನಿಸಿದನು. ಕುಸುಮಾಜಿ ರಾಯನಿಗೆ ಕೈಮುಗಿದು ಬೀಳ್ಕೊಂಡಳು. ರಾಯನು ಅವಳನು ಕಳುಹಿಸಿದ ನೋಟದಲ್ಲಿ

ಒಳ ಅರ್ಥವಿತ್ತು. ಕಟ್ಟಿಗೆಯ ಹೆಣ್ಣುಗಳು "ಗೆಲ್ಲು, ಗೆಲ್ಲು, ನಮ್ಮರಸಿ!" ಎಂದರು. ಕುಸುಮರಾಜಿ ತನ್ನ ಪತಿಯ, ಪಂಡಿತೆಯ ಹೃದಯದ ತಂತ್ರವನ್ನು ತಿಳಿದರೂ ಅದನ್ನು ಕುರಿತು ಉಸಿರೆತ್ತದೆ ನಲಿಯುತ್ತ ಹೊರಟಳು. ಓಲಗ ಸಾಲೆಯ ಬಾಗಿಲಲ್ಲಿ ಚಾಮರ ಹಾವುಗೆ ಗಿಂಡಿ ಎಲೆ ಅಡಿಕೆ ಚೀಲಗಳನ್ನು ಹಿಡಿದ ಹೆಣ್ಣುಗಳು ಎದುರಾದರು. ದೇವಲೋಕದ ಹೆಂಗಸು ನರಲೋಕಕ್ಕೆ ಇಳಿಯುವಂತೆ ಮೆಟ್ಟಲುಗಳನ್ನು ಇಳಿದು, ಕುಸುಮರಾಜಿ ತನ್ನ ಮನೆಗೆ ನಡೆದಳು.

ಕೃತಿಯನ್ನು ಗಾಯನಮಾಡಿದ ಗಾಯಕಿಗೆ ಸನ್ಮಾನಮಾಡಿಯಾಯಿತು. ಓಲಗಕ್ಕೆ ಬಂದಿದ್ದ ರಾಣಿಯರೆಲ್ಲ ರಾಯನ ಅಪ್ಪಣೆಯನ್ನು ಪಡೆದು ಹೊರಟರು. ಕಾವಲುಕೋಲು ಹಿಡಿದ ಸೇವಕಿಯರು "ಈ ರಾಣಿ! ಆ ರಾಣಿ! ಈ ದೇವಿ! ಆ ದೇವಿ!" ಎಂದು ಪರಾಕು ಹೇಳುತ್ತಿದ್ದರು.

ಉಪ್ಪರಿಗೆಯಿಂದ ಇಳಿದು ಬರುವಾಗ "ಇವಳ ನೋಡು! ಅವಳ ನೋಡು! ಇಂದಿನ ಕಾವ್ಯದ ಕವಿಗಳು ಇಬ್ಬರನ್ನು ನೋಡು!" ಎಂದು ಸುತ್ತಿನವರು ಆಡುವುದನ್ನು ಕೇಳಿ, ಅಮರಾಜಿ ಸುಮನಾಜಿಯರು ನಗುತ್ತ ನಡೆದರು. "ಹೌದು, ಹೌದು. ಅರಸನ ತೋಳನ್ನು ಹೊಡೆದು ಬಂದವರಿಗೆ ನಗುವಲ್ಲದೆ ಮತ್ತೇನು?" ಎಂದು ಎಲ್ಲರೂ ಪರಿಹಾಸ ಮಾಡುತ್ತಾ ಮೆಟ್ಟಲಿಳಿದು ಹೋದರು.

೪

ಅಂದಿನ ಬೆಳಗಿನ ಓಲಗ ಮುಗಿಯಿತು. ಊಳಿಗದ ಹೆಣ್ಣುಗಳು ಅವರೂ ಅಲ್ಲಿಂದ ಕಾಲುತೆಗೆದರು. ಅರಸನು ತಾನು ಒಬ್ಬನೇ ಆದನು.

ಇದುವರೆಗೆ ತನ್ನ ಅಷ್ಟು ಮಂದಿ ಹೆಂಡಿರೊಂದಿಗೆ ಲೀಲೆಯಿಂದ ಲಲ್ಲೆಯಿಂದ ಆಡಿದ ಮಾಡಿದ ಆ ಸಂಭ್ರಮ ಈಗ ಎಲ್ಲಿಹೋಯಿತು? ಗದ್ದುಗೆಯಲ್ಲಿ ಆಸನ ಹಾಕಿ ಕುಳಿತು, ಕಣ್ಮುಚ್ಚಿ, ಹತ್ತುಸಾವಿರ ಕಾಲ ತಪಸ್ಸುಮಾಡಿದ ಮುನಿಯಂತೆ ಧ್ಯಾನದಲ್ಲಿದ್ದಾನೆ!

ದೊರೆಯು 'ಹೋಗು' ಎಂದರೆ ಹೋಗಿ, 'ಬಾ' ಎಂದರೆ ಬರುವ ಸೇವಕರ ಹಾಗೆ – ಅವನ ಇಂದ್ರಿಯಗಳು ಅವನು ಹೇಳಿದಂತೆ ಕೇಳುತ್ತಿವೆ.

ಗಾಳಿಪಟವನ್ನು ಬೇಕಾದಾಗ ಆಡಿಸಿ, ಸಾಕಾದಾಗ ಸುರುಳಿ ಸುತ್ತುವವನ ಹಾಗೆ – ಚಿತ್ತವನ್ನು ಹೊರಗೆ ನೂಕಿ ಆಡಿಸಲೂ ಬಲ್ಲ, ಒಳಗೆ ಎಳೆದು ಏಕವಾಗಿಸಲೂ ಬಲ್ಲ.

ಒಮ್ಮೆ ಹೊಳೆದು ಹೊರಗೆ ಕಣ್ಣಿಕ್ಕಿ ಸೇವಕರಿಂದ ಮೈಗೆ ಕೆಲಸವನ್ನು ಕೈಕೊಳ್ಳುವನು ; ಇನ್ನೊಮ್ಮೆ ಒಳಗೆ ಕಣ್ಣಿಕ್ಕಿ ಆತ್ಮನಿಗೆ ಕರಣೇಂದ್ರಿಯಗಳ ಸೇವೆಯನ್ನು ಕೈಕೊಳಿಸುವನು. ಇಂದ್ರಿಯಸುಖವನ್ನು ಹೊರಗೆ ಭೋಗಿಸುವನು ; ಅತೀಂದ್ರಿಯ ಸುಖವನ್ನು ಒಳಗೆ ಭೋಗಿಸುವನು.

ಇತರರ ಹಾಗೆ ಮೈಯನ್ನು ಒಣಗಿಸಿ ಮಾಡುವ ಬಾಹ್ಯತಪಸ್ಸು ಅದು ಎಂಥ ತಪಸ್ಸು ? ಈತನ ಹಾಗೆ ಮನಸ್ಸನ್ನು ದಂಡಿಸಿ ಕರ್ಮವನ್ನು ಒಣಗಿಸುವ ಈ ತಪಸ್ಸೇ ತಪಸ್ಸು ! ಹೆಂಗಸರು ಬೇಡವೆಂದು ಅವರನ್ನು ತೊರೆಯುವುದು – ಅದು ವ್ಯವಹಾರದ ಬ್ರಹ್ಮಚರ್ಯಾಂಗ ! ಚಿತ್ತವನ್ನು ಆತ್ಮನಲ್ಲಿ ನಿಶ್ಚಲವಾಗಿ ನಿಲ್ಲಿಸುವ ಇದು — ನಿಶ್ಚಯಬ್ರಹ್ಮಚರ್ಯಾಂಗ !

“ನಾನು ಆತ್ಮ, ಇದು ದೇಹ. ನಾನೇ ಸುಜ್ಞಾನಿ, ಈ ದೇಹ ಅಜ್ಞಾನಿ” ಎಂದು ತಿಳಿದು, ಜ್ಞಾನದ ಕಣ್ಣಿನಿಂದ ಆ ರಾಯನು ತನ್ನ ದೇಹದೊಳಗಿದ್ದ ಆತ್ಮನನ್ನು ನೋಡುತ್ತಿದ್ದನು. ಮೊದಲು ಒಂದು ಸಲ ‘ದೇಹ ಬೇರೆ, ಆತ್ಮ ಬೇರೆ’ ಎಂದು ತನ್ನ ಎದೆಯಲ್ಲಿ ಸ್ಮರಿಸಿದನು. ಆದು ಮತ್ತೆ ಮರೆಯಾಗಿ, ದೇಹವನ್ನು ಮರೆತು, ತನ್ನ ಆತ್ಮವನ್ನು ಮಾತ್ರ ತಾನು ಕಂಡನು.

ಆ ರಾಜ ಆ ಮನೆಯಲ್ಲಿ ಇದ್ದ, ಆ ಗದ್ದುಗೆಯಲ್ಲಿ ಇದ್ದ, ಆ ದೇಹದಲ್ಲಿ ಇದ್ದ — ಎಂದು ಯಾರು ಹೇಳಿದರೂ ಅವನು ಮನೆಯಲ್ಲಿಲ್ಲ, ಗದ್ದುಗೆಯಲ್ಲಿಲ್ಲ, ಮೈಯಲ್ಲೂ ಇಲ್ಲ ! ತನ್ನ ಅನುಪಮವಾದ ಆತ್ಮದಲ್ಲಿ ಆಗ ತಾನು ಲೀನನಾಗಿದ್ದನು !

## ಭಾಗ ಎರಡು: ಆ ಅಕ್ಕನ ತಂಗಿ

### ೧

ಅರಸನು ಹೀಗೆ ಧ್ಯಾನತತ್ಪರನಾಗಿ, ತನ್ನ ಹೊರಗಿನ ಲೋಕವನ್ನು ಮರೆತು, ತನ್ನಲ್ಲಿ ತಾನು ಲೀನನಾಗಿ ಇರುವಾಗ — ಹೊತ್ತನ್ನು ಸೂಚಿಸುವ ಅರಮನೆಯ ಗಡಿಯಾರದ ಶಂಖ ಶಬ್ದಮಾಡಿತು. ದೊರೆ ಆ ಶಬ್ದವನ್ನು ಕೇಳಿದ ಕೂಡಲೆ, ಮನಸ್ಸಿನಲ್ಲಿ ತಾನು ಧ್ಯಾನಿಸುತ್ತಿದ್ದ ಜಿನದೇವರಿಗೆ ಪರಮ ಭಕ್ತಿಯಿಂದ ಪೂಜೆಯನ್ನು ಮುಗಿಸಿ, ಕಣ್ಣುಬಿಟ್ಟನು. ಅರಸನಿಗೆ ಧ್ಯಾನದಿಂದ ಎಚ್ಚರವಾದುದನ್ನು ಕಂಡು, ಕಟ್ಟಿಗೆಯ ಹೆಣ್ಣುಗಳು "ಜಯ ಜಯಾ!" ಎಂದು ಘೋಷಿಸಿದರು. "ಮುನಿಗಳ ಊಟಕ್ಕೆ ವೇಳೆಯಾಯಿತು, ಸ್ವಾಮಿ!" ಎಂದು ಸೇವಕಿಯರು ವಿಜ್ಞಾಪಿಸಿಕೊಂಡರು. "ಜಿನಸಿದ್ಧ! ನಿರಂಜನಸಿದ್ಧ! ಶರಣು" ಎಂದುಕೊಳ್ಳುತ್ತ ದೊರೆಯು ಗದ್ದುಗೆಯಿಂದ ಎದ್ದನು.

ಚಿನ್ನದ ಬೆಟ್ಟವನ್ನು ಏರಿ ಅಲ್ಲಿ ತಪಸ್ಸುಮಾಡುತ್ತಿದ್ದವನು ಭೂಮಿಗೆ ಇಳಿದು ಬರುವ ಹಾಗೆ — ಆ ಆತ್ಮರಸಿಕನಾದ ರಾಯನು ತನ್ನ ಹೊನ್ನ ಉಪ್ಪರಿಗೆಯಿಂದ ಕೆಳಗೆ ಇಳಿದನು. "ಪಾದಾವಧಾನ! ಎಚ್ಚರಿಕೆ! ಆರೈಕೆ!" ಎಂದು ಕಟ್ಟಿಗೆಯ ಹೆಣ್ಣುಗಳು ದಾರಿತೋರಿದರು.

ಉಪ್ಪರಿಗೆಯಿಂದ ಇಳಿದವನು, ಎಂದಿನ ಹಾಗೆಯೇ ದಾರಿಯಲ್ಲಿ ಆ ಮಾರ್ಗವಾಗಿ ಬರುವ ಜೈನಮುನಿಗಳನ್ನು ಎದುರುನೋಡುತ್ತ ನಿಂತನು. ಸ್ವಲ್ಪಹೊತ್ತಿನಲ್ಲಿಯೇ ಕೆಲವರು ಉತ್ತಮರಾದ ಮುನಿಗಳು ಬಂದರು. ರಾಯನು ಅವರನ್ನು ನಿಲ್ಲಿಸಿ, ಮನೆಗೆ ಕರೆದುಕೊಂಡು ಹೋಗಿ, ಅಲ್ಲಿ ತನಗಾಗಿ ಮಾಡಿ ಸಿದ್ಧವಾಗಿದ್ದ ಉತ್ಕೃಷ್ಟಾನ್ನವನ್ನು ಅವರಿಗೆ ಉಣಿಸಿದನು. ಅವರು ತೃಪ್ತರಾದ ಮೇಲೆ, ಅವರನ್ನು ಕಳುಹಿಸಿಕೊಟ್ಟು, ತಾನು ಕುಸುಮಾಜಿಯ ಮನೆಗೆ ಬಂದನು.

ಕುಸುಮಾಜಿಗೆ ಒಬ್ಬಳು ತಂಗಿ. ಅವಳ ಒಡನೆ ಹುಟ್ಟಿದವಳು. ಹೆಸರು – ಮಕರಂದಾಜಿ. ಇನ್ನೊಂದು ಅರ್ಧವರುಷಕ್ಕೆ ಪ್ರಾಯತುಂಬುವುದು ಎಂಬ ಹಾಗಿರುವ ಕನ್ಯೆ. ಚೆಲುವೆ. ಜಾಣೆ.

ಇವಳು ಶೃಂಗಾರದ ಮಂಗಲದ್ರವ್ಯಗಳನ್ನು ಸಖಿಯರ ಕೈಯಲ್ಲಿ ತೆಗೆಯಿಸಿಕೊಂಡು ಬಂದು, ತೊಟ್ಟಿಯಲ್ಲಿ ತೂಗುಮಂಚದಮೇಲೆ ಒಲೆದಾಡು ತ್ತಿದ್ದ ಭಾವನನ್ನು ನೋಡಿದಳು. ಗೆಳತಿಯ ಕೈಯಲ್ಲಿದ್ದ ಚಿನ್ನದ ತಟ್ಟೆಯನ್ನು ತಾನು ಎತ್ತಿಕೊಂಡು, ಅದರೊಳಗಿನ ಚಂದನ ತಾಂಬೂಲ ಅಕ್ಷತೆಗಳನ್ನು ತನ್ನ ಕೋಮಲವಾದ ತೋಳನ್ನೇ ನೀಡಿ ಭಾವನಿಗೆ ಕೊಟ್ಟಳು. ಅರಸನು ಅದನ್ನು ಪ್ರೀತಿಯಿಂದ ಸ್ವೀಕರಿಸಿದನು.

“ ಅನುಕೂಲವಾಗಿದೆ. ಭೋಜನಕ್ಕೆ ನಮ್ಮ ಮನೆಗೆ ಬಾ, ಭಾವಾಜಿ ” ಎಂದು ಮಕರಂದಾಜಿ ಕರೆದಳು.

ಅದಕ್ಕೆ ರಾಯನು ನಗುತ್ತ, ನಾದುನಿಯನ್ನು ಕುರಿತು “ ಈಗ ನೀನು ನಿನ್ನ ಮನೆಗೆ ಕರೆದರೆ, ನಾನು ಬರುವುದು ಉಚಿತವೆ? ಇನ್ನೊಂದು ಅರ್ಧವರ್ಷ ಆದಮೇಲೆ ಕರೆದರೆ, ಬರುತ್ತೇನೆ. ಹೋಗು ” ಎಂದನು.

“ ಅಕ್ಕಾಜಿಯವರ ಮನೆಗೆ ಏಳು, ಎಂದು ನಾನು ಹೇಳಿದರೆ — ಇದೇನಿದು ನಿನ್ನ ಠಕ್ಕು ಮಾತು ? ”

“ ಠಕ್ಕು ಯಾರದು ನೋಡು. ನಿನ್ನ ಮನೆಗೆ ಬಾ ಎಂದು ಕರೆದೆಯೆ ಹೊರತು, ನಿನ್ನ ಅಕ್ಕನ ಹೆಸರು ಹೇಳಿದೆಯ ? ”

“ ಅಕ್ಕನ ಹೆಸರನ್ನು, ಆಕೆ ಮಕ್ಕಳು ಪಡೆದರೆ, ಆ ಮಕ್ಕಳು ಮುಂದೆ ಹೇಳುವರು. ಅದಕ್ಕೂ ನನಗೂ ಏನು ಸಂಬಂಧ? ಸಾಕೇಳು. ಸಿಕ್ಕಿದ ಮಾತು ಬೇಡ.”

“ ಎಲಾ! ಸಾಕೇಳು, ಸಲಹೇಳು ಎಂದು ಆಗಲೇ ಆಕರ್ಷಣಮಾಡ ತೊಡಗಿದಳಲ್ಲ! ಅಬ್ಬಾಬ್ಬಾ! ಏನು ಕಾತರವೊ ಈಕೆಗೆ! ”

“ ಆ ಕಾತರ ಗೀತರ ಎಲ್ಲಾ ನಿಮಗೆ ಗೊತ್ತು, ನಿಮ್ಮ ರಾಣಿಯರಿಗೆ ಗೊತ್ತು. ಆ ಸುದ್ದಿಗಿದ್ದಿ ನಮಗೇನು ಗೊತ್ತು ? ಮಾತು ಸಾಕು. ಭೋಜನಕ್ಕೆ ಏಳು, ಭಾವಾ.”

"ಸರಸಗಳನ್ನು ಅತಿಮಾಡುವುದು ಸರಿಯಲ್ಲ" ಎಂದು ನೆನೆದು, ರಾಯನು ಅಷ್ಟಕ್ಕೆ ಮಾತು ಮುಗಿಸಿ ಎದ್ದನು. ಮಿನುಗುವ ರತ್ನದ ಪಾದರಕ್ಷೆ ಗಳನ್ನು ಮೆಟ್ಟಿ ಕುಸುಮಾಜಿಯರ ಅಂತಃಪುರಕ್ಕೆ ನಡೆದನು. ಹೂ ಇದ್ದ ಕಡೆಗೆ ದುಂಬಿ ಹೋಗುವ ಹಾಗೆ, ಅರಸನು ನಾದುನಿಯೊಡನೆ ಉಲ್ಲಾಸದಿಂದ ಮಾತನಾಡುತ್ತ ನಡೆದನು.

"ದೊರೆ ಬರುತ್ತಿದ್ದಾನೆ" ಎಂದು ಸೇವಕಿಯರು ಓಡಿಹೋಗಿ ಹೇಳಿದರು. ಹೇಳಿದ್ದೆ ತಡ, ಕುಸುಮಾಜಿ ತನ್ನ ಸಖಿಯರ ಸುತ್ತಿನಲ್ಲಿ ಸಡಗರದಿಂದ ತಾನೇ ಎದುರಾಗಿ ಬಂದಳು. ಆಕೆಯ ದೇಹದ ಸೌಗಂಧಕ್ಕೆ ಸೋತು, ದುಂಬಿಗಳು ಝೇಂಕರಿಸುತ್ತ ಆಕೆಯನ್ನು ಹಿಂಬಾಲಿಸಿದುವು. ಅಂಗಾಂಗಗಳಲ್ಲಿ ತುಂಬಿದ ಹೊಸ ಶೃಂಗಾರ. ಕೈಯಲ್ಲಿ ರತ್ನದ ಆರತಿ. ಬಂದವಳೆ ಕುಸುಮಾಜಿ, ಆರತಿ ತಂದವಳೆ, ಅರಸನಿಗೆ ಆರತಿ ಎತ್ತಿದಳು. ಆರತಿಯ ಬೆಳಕಿನಲ್ಲಿ ಅವಳ ಮುಖಕಾಂತಿ ಇನ್ನಷ್ಟು ಚೆಲುವಾಯಿತು. ಆರತಿ ಆದಮೇಲೆ ಅರಸನ ಕಾಲಿಗೆ ತಲೆಮುಟ್ಟಿ ಎರಗಿದಳು. ಆ ತಲೆ ತನ್ನ ಕಾಲಿಗೆ ಸೋಕುವ ಮೊದಲೇ ಅರಸನು "ಹಾ! ಹಾ!" ಎಂದು ತಡೆದು ಪ್ರೀತಿಯಿಂದ ಅವಳನ್ನು ಎಬ್ಬಿಸಿದನು. ಮುಂದೆ ಏಳೆಂಟು ಮಾರು ದೂರ ಕೈಹಿಡಿದು ನಡೆಸಿಕೊಂಡು ಹೋಗಿ, ಕುಸುಮಾಜಿ ಕೈಮುಟ್ಟಿ ಗಂಡನ ಪಾದಗಳನ್ನು ತೊಳೆದಳು. ತಾನು ಉಟ್ಟ ದುಕೂಲದ ಸೆರಗಿನಿಂದ ಪತಿಯ ಪಾದಗಳನ್ನು ಒರಸಿದಳು.

ಅರಸನು ಅಂತಃಪುರವನ್ನು ಪ್ರವೇಶಿಸಿದನು.

೨

"ಅಕ್ಕಾ! ಭಾವ ಬಂದ ನಮ್ಮ ಮನೆಗೆ! ದೇವಿ, ಗದ್ದುಗೆ ಹಾಕು! ಭಾವನಿಗೆ ಮನ್ನಣೆ ಮಾಡು!" ಎಂದು ಅಲ್ಲಿದ್ದ ಅರಗಿಳಿ ಕೂಗಿತು.

"ಓಹೋ! ಇವನೇಯೋ ಅಮೃತವಾಚಕ, ಕುಸುಮಾಜಿ?" ಎಂದು ಅರಸನು ಪ್ರಶ್ನಿಸುತ್ತ, ಸೂರ್ಯನು ಪೂರ್ವದ ಬೆಟ್ಟವನ್ನು ಏರುವ ಹಾಗೆ, ಆಕೆ ಇಟ್ಟ ಗದ್ದುಗೆಯನ್ನು ಹತ್ತಿ ಕುಳಿತನು.

"ಬಂದೆಯಾ ಭಾವ! ಬಂದೆಯಾ ಸುಪ್ರಭಾವಾ! ಐತಂದೆಯಾ ಸುಗುಣಸ್ವಭಾವಾ! ಬಂದುದು ಲೇಸು ಮಹಾನುಭಾವಾ!" ಎಂದು ಕೂಗಿತು, ಆ ಮುದ್ದಿನ ರಾಜಕೀರ.

"ಕ್ಷೇಮವಾಗಿದ್ದೀಯಾ, ಭಾವಾಜಿ? ಆರೋಗ್ಯವಾಗಿದ್ದೀಯಾ, ಭಾವಾಜಿ? ಆಗಾಗ್ಗೆ ಈ ಮನೆಗೆ ಬರುತ್ತಿರು, ಭಾವಾಜಿ. ಬಡವರನ್ನು ಮರೆಯಬೇಡ. ಏನು, ರಾಜ್ಯಕ್ಕೆ ನಾನೇ ಒಡೆಯ ಎಂದು ಗರ್ವವೇನು? ನಮ್ಮಕ್ಕನ ಅರಮನೆಗೆ ಆಗಾಗ ಬರುವುದಿಲ್ಲ ಏಕೆ? ಈಗ ಬಂದಿದ್ದೀಯಲ್ಲ; ಅದು ಹೇಗೆ ಹೋಗುತ್ತೀಯೆ, ನೋಡುತ್ತೇನೆ. ಹಗ್ಗದಿಂದ ನಿನ್ನ ಕಾಲು ಕಟ್ಟಿಹಾಕಿಬಿಡುತ್ತೇನೆ" ಎಂದಿತು, ಗಿಳಿ.

ರಾಜನಿಗೆ, ಅದರ ಮಾತು ಕೇಳಿ ನಗು ಬಂತು.

"ನಗುವಲ್ಲವೆ ನಿನಗೆ! ನಮ್ಮ ಅಕ್ಕನ ಪ್ರಾಣವನ್ನು ಸೂರೆಗೊಂಡು, ಅವಳ ಹತ್ತಿರ ಬಂದಿರದೆ, ದೂರದಲ್ಲಿದ್ದೆಯಲ್ಲವೆ! ಈಗ ಸಿಕ್ಕಿದ್ದೀಯೆ, ಇರಲಿ. ನಮ್ಮಕ್ಕನ ತಲೆಯಲ್ಲಿ ಉದ್ದನಾದ ಅಲೆಯಲೆ ಕೂದಲಿನ ಕಣ್ಣಿಯಿದೆ, ಅವಳ ಕೋಮಲವಾದ ತೋಳುಗಳೆಂಬ ಪಾಶಗಳೂ ಇವೆ. ಅದು ಹೇಗೆ ತಪ್ಪಿಸಿಕೊಂಡು ಹೋಗುತ್ತೀಯೆ, ನೋಡುತ್ತೇನೆ.

"ಒಳ್ಳೆಯ ಮಾತಿನಲ್ಲಿ ಹೇಳುತ್ತೇನೆ, ಕೇಳು. ನಮ್ಮ ಅಕ್ಕನ ಹತ್ತಿರ ಮೈಸೋಂಕಿ ಕುಳಿತಿದ್ದೆಯೋ, ಸರಿ. ಹಾಗಲ್ಲದೆ, ಏನಾದರೂ ಎದ್ದು ಹೋಗುವೆನೆಂದರೆ, ನಮ್ಮಕ್ಕನ ಕಡೆಗಣ್ಣಿನ ಕಾಂತಿಯು ಬೆಳ್ಳಿಯ ಸಂಕೋಲೆಗಳನ್ನು ಇಕ್ಕಿಸಿಬಿಡುತ್ತೇನೆ. ಜೋಕೆ!

"ಆಹಾ! ನಾನು ಪಂಜರದಲ್ಲಿ ಇದ್ದೇನೆ, ನನ್ನ ಕೈಲಿ ಏನೂ ಆಗುವುದಿಲ್ಲ, ಎಂದುಕೊಳ್ಳಬೇಡ. ನೀನೇನಾದರೂ ಮೋಸಮಾಡಿ ಇಲ್ಲಿಂದ ಎದ್ದೆಯೋ, ನಮ್ಮ ಅಕ್ಕನ ದೇಹದ ಕಾಂತಿಯ ಚಿನ್ನದ ಪಂಜರದಲ್ಲಿ ನಿನ್ನನ್ನು ಕೂಡಿಹಾಕಿಸಿಬಿಡುತ್ತೇನೆ!"

"ಇದೇಕೆ, ಅಮೃತವಾಚಕ, ನನ್ನ ಮೇಲೆ ಇಷ್ಟು ಕೋಪ ನಿನಗೆ? ನಿಮ್ಮ ಅಕ್ಕನಿಗೆ ನಾನೇನು ಕಷ್ಟ ಕೊಟ್ಟೆ? ಶಿಷ್ಟರು ಎಂದು ನಿಮ್ಮ ಮನೆಗೆ ನಾನು ಬಂದರೆ, ನೀವಿಬ್ಬರೂ ದುಷ್ಟರ ಹಾಗೆ ಆಡುತ್ತೀರಲ್ಲ!" ಎಂದ, ಅರಸ.

ಗಿಳಿ ಹೇಳಿತು:

"ನೋವಾಯಿತೆ, ಭಾವಾಜಿ? ನಮ್ಮ ಅಕ್ಕನ ಅಧರದಲ್ಲಿ ಸಂಜೀವನದ ಅಮೃತ ಇದೆ. ಅದನ್ನು ಸವಿದು ಜೀವಸಿದ್ಧಿಯನ್ನು ಪಡೆದು, ಇಲ್ಲೇ ಇರು.

"ಭಾವಾ! ನನಗೆ ವನದಲ್ಲಿ ನೇರಿಳೆಹಣ್ಣು ಉಂಟು. ನಿನಗೆ ನಮ್ಮ ಅಕ್ಕನ ಮುಖದಲ್ಲೇ ನೇರಿಳೆಹಣ್ಣು ಉಂಟು. ನಾನು ಅದನ್ನು ಅಲ್ಲಿ ರುಚಿ ನೋಡುತ್ತೇನೆ. ನೀನು ಇದನ್ನು ಇಲ್ಲಿ ರುಚಿನೋಡುತ್ತ ಇಲ್ಲೇ ಇರು.

"ಭಾವಾ! ನಮ್ಮಕ್ಕನ ನಡು — ಅದೆ ಸಿಂಹಳದೇಶ. ಅವಳ ಮುಡಿ — ಅದೇ ಕುಂತಳದೇಶ. ಕರ್ಣವೇ ಕರ್ಣಾಟಕದೇಶ. ಮೈಯ ಸುವಾಸನೆಯೇ ಕಾಶ್ಮೀರದೇಶ. ಈ ದೇಹದ ದೇಶಗಳನ್ನು ಆಳುವುದು ಬಿಟ್ಟು, ನಿನಗೆ ಬೇರೆ ದೇಶಗಳ ಗೊಡವೆಯೇಕೆ, ಭಾವ!

"ಭಾವಾ! ಕೃಶಾಂಗಿಯಾದವಳ, ಯೌವನದವಳ, ಲಾವಣ್ಯರಸದ ತಂಪುಹೊಳೆ ಇಲ್ಲಿರುವಾಗ — ವನಕ್ರೀಡೆ ಜಲಕ್ರೀಡೆ ಆಡಿ; ಕಾತರದ ಬಿಸಿಲನ್ನು ಆರಿಸಿಕೊಳ್ಳದೆ, ಹೋಗಬಹುದೆ, ಭಾವ!

"ಇದಿಷ್ಟೇ ಅಲ್ಲದೆ, ಭಾವಾ, ಈ ಮಾನಿನಿಯ ಮುಖದಲ್ಲಿ ಒಂದು ಜೇನುತುಪ್ಪದ ಕೊಡ ಉಂಟು. ಆದರೆ, ನೀನು ಜೈನನಲ್ಲವೆ! ಜೈನರಾದ ನಿಮಗೆ ಜೇನು ನಿಷಿದ್ಧ! ಪಾಪ, ಏನು ಮಾಡುವುದು!"

ಅರಸನು ನಕ್ಕನು. "ಈ ಮಾತುಗಳೆಲ್ಲ ಗಿಳಿಯ ಯೋಚನೆಯಲ್ಲ. ಯಾರೋ ಹೆಣ್ಣು ವಿನೋದಕ್ಕಾಗಿ ಇದಕ್ಕೆ ಈ ಮಾತನ್ನೆಲ್ಲ ಕಲಿಸಿರಬೇಕು. ಇನ್ನು ಯಾರು? ಈ ಮಾತು ಈ ಸರಸ ಕಲಿಸಿರಬೇಕಾದರೆ — ಈ ನಾದಿನಿಯೇ ಇರಬೇಕು. ಇದು ನಿಜವಾಗಿಯೂ ಮಕರಂದೆಯ ತಂತ್ರವೇ" ಎಂದುಕೊಂಡ.

ಅರಸನಿಗೆ ಅವಳ ಜಾಣ್ಮೆ ಕಂಡು ಅತಿಶಯವಾದ ಮೆಚ್ಚಿಕೆಯಾಯಿತು. ಅವಳನ್ನು ಬಿಗಿದಪ್ಪಬೇಕು ಎಂದು ಮನಸ್ಸಾಯಿತು.

"ಕರೆದರೆ, ಬರುವುದಿಲ್ಲ. ಇದಕ್ಕೊಂದು ತಂತ್ರಮಾಡೋಣ." ಎಂದುಕೊಂಡು, "ಮಕರಂದಾಜಿ! ಆ ಗಿಳಿ ಎಷ್ಟು ಚೆನ್ನಾಗಿ

ಮಾತನಾಡುತ್ತಿದೆ, ನೋಡು. ಎಲ್ಲಿ, ಅದನ್ನು ಇಲ್ಲಿ ತಂದುಕೊಡು" ಎಂದ.

ಕುಸುಮಾಜಿ ಗಿಳಿಯನ್ನು ಎತ್ತಿಕೊಂಡು ಬಂದಳು. ರಾಜ ಅವಳನ್ನು ಹಿಡಿದು, ಬಿಗಿಯಾಗಿ ಬಿಗಿದಪ್ಪಿಕೊಂಡ. ಬಿಡಿಸಿಕೊಳ್ಳುವುದಕ್ಕೆ ಅವಳು ಅತ್ತಿತ್ತ ಒಲೆದಳು. ಅರಸ ಬಿಡಲಿಲ್ಲ. ಮುತ್ತುಕೊಟ್ಟ. ಕೊರಳಿಗೆ ಕಂಠ ಮಾಲೆಯನ್ನು ಸುತ್ತಿದ. "ಮೆಚ್ಚಿದೆ, ಮಕರಂದೆ!" ಎಂದು ಬಿಟ್ಟ.

ಕುಸುಮಾಜಿ ನಗುತ್ತ ನೋಡಿದಳು. "ದೇವರು ಈ ಹುಚ್ಚಿಗೆ ಏನೆಂದು ಮೆಚ್ಚಿದಿರಿ!" ಎಂದಳು.

ರಾಜ ತಲೆದೂಗುತ್ತ "ನಿಮ್ಮ ತಂತ್ರವೆಲ್ಲ ನನಗೂ ಗೊತ್ತು. ಈ ಗಿಳಿಗೆ ಈ ಹೊಸಮಾತುಗಳನ್ನು ಕಲಿಸಿದವಳು ಈ ಮಕರಂದಾಜಿ ಅಲ್ಲವೆ? ಇವಳ ಜಾಣತನಕ್ಕೆ ನನ್ನ ಮೆಚ್ಚಿಕೆ ಸೂಚಿಸಿದೆ, ಅಷ್ಟೆ" ಎಂದ.

ಕುಸುಮಾಜಿ ತಂಗಿಯನ್ನು ಕುರಿತು ಹೇಳಿದಳು. "ಆಯಿತೇ, ತಂಗಿ! ನಾನು ಆಗಲೇ ಬೇಡವೆಂದು ಎಷ್ಟು ಹೇಳಿದೆ! ನೀನು ಕೇಳಲಿಲ್ಲ. ಬೀಸಿದ ಗಾಳಿಯ ಗುರುತನ್ನು ಕಾಣುವ ನಿನ್ನ ಭಾವನ ಹತ್ತಿರ ನೀನು ವಾದಮಾಡಿದರೆ, ಗೆದ್ದಹಾಗೆಯೇ!" ಎಂದಳು.

ಅನಂತರ ರಾಯನ ಕಡೆ ತಿರುಗಿ, "ನಾನು ಆಗ ಉಪ್ಪರಿಗೆಯಿಂದ ಇಲ್ಲಿಗೆ ಬಂದಾಗ, ನೀವು ಬರುವಿರೆಂಬ ವಾರ್ತೆಯನ್ನು ಕೇಳಿದಳು. ಆಮೇಲೆ ಗಿಳಿಗೆ ಏನೋ ಹೊಸ ಮಾತು ಹೇಳಿಕೊಡುತ್ತಿದ್ದಳು. 'ಏನು ಹೇಳು ತ್ತಿದ್ದೀಯೆ, ತಂಗಿ?' ಎಂದೆ. 'ಅಕ್ಕ, ಇಂದು ಭಾವಾಜಿ ನಮ್ಮ ಮನೆ ಯನ್ನು ಹೊಕ್ಕಾಗ ಈ ಗಿಳಿಯಿಂದ ಸರಸವಾಡಿಸುತ್ತೇನೆ' ಎಂದಳು. 'ಬೇಡ, ತಂಗಿ. ನಿನ್ನ ಭಾವನನ್ನು ಜಯಿಸುವುದು ಸಾಧ್ಯವಿಲ್ಲ. ನನ್ನ ಮಾತು ಕೇಳು' ಎಂದು ಎಷ್ಟು ಹೇಳಿದರೂ ಕೇಳದೆ, ಹಠಹಿಡಿದಳು. ನಾನು ಅರಗಿಳಿ ಯನ್ನು ಕೊಡು ಎಂದರೆ, ಎತ್ತಿಕೊಂಡು ಎದ್ದೇಬಿಟ್ಟಳು. ಅವಳನ್ನು ಹಿಡಿಯಿರಿ, ಎಂದು ಸಖಿಯರನ್ನು ಅಟ್ಟಿದರೆ, ಹಿತ್ತಿಲಕಡೆಗೆ ಓಡಿಬಿಟ್ಟಳು. 'ಸರಿ, ಈಗ ಇವಳೊಡನೆ ಆಟಕ್ಕೆ ವೇಳೆಯಿಲ್ಲ' ಎಂದು ನಾನು ನನ್ನ ಮನೆ ಕೆಲಸವಲಿದು ಬಿಟ್ಟೆ. ಅವಳು ಅರಗಿಳಿಗೆ ಮಾತು ಕಲಿಸಿ, ಸಂಭ್ರಮದಿಂದ

ಮತ್ತೆ ಒಳಗೆ ಬಂದಳು. ಇವಳು ಕಲಿಸಿದ ಮಾತನ್ನು ನಾನು ಈ ಮೊದಲು ಏನಾದರೂ ಕೇಳಿದ್ದೆನಾದರೆ, ನಿನ್ನ ಮೇಲಿನ ಆಣೆ!" ಎಂದಳು.

"ಅಯ್ಯೋ! ಈ ಹುಡುಗಿ ಸಾಮಾನ್ಯೆ ಎಂದುಕೊಳ್ಳಬೇಡಿ. ಇವಳು ತುಂಬ ಕುಟಿಲ ಕಲಿತಿದ್ದಾಳೆ" ಎಂದು ತಂಗಿಯನ್ನು ಕುರಿತು ಕುಸುಮಾಜಿ ಎಂದಳು.

"ನಿನಗೂ ನಿನ್ನ ಅರಸನಿಗೂ ನಾನೇನು ಕುಟಿಲಮಾಡಿದೆ, ಅಕ್ಕ? ಮಕರಂದಾಜಿ, ಆ ಗಿಳಿಯನ್ನು ಇಲ್ಲಿ ತಾ ಎಂದು ಚೇಷ್ಟೆಮಾಡಿದ ನಿನ್ನ ಗಂಡ – ಅವನೀಗ ಕುಟಿಲ."

"ಮುಚ್ಚು. ಬಾಯಿಮುಚ್ಚು, ಧೂರ್ತ ಹುಡುಗಿ ಸ್ವಾಮಿ ಮೆಚ್ಚು ಕೊಟ್ಟರೆ, ಅದನ್ನು ಚೇಷ್ಟೆ ಎನ್ನುತ್ತೀಯ!"

"ಆ ಮೆಚ್ಚು ಗಿಚ್ಚು ನಿನಗಿರಲಿ. ಬರಸೆಳೆದು ಬಿಗಿದಪ್ಪುವುದಕ್ಕೆ ನಾನೇನು ನಿನ್ನಂತೆ ಇವನ ಅರಸಿಯೆ? ಅಕ್ಕನನ್ನು ನೋಡೋಣ ಎಂದು ನಿನ್ನ ಮನೆಯನ್ನು ಹೊಕ್ಕರೆ, ಒಳ್ಳೆಯ ಫಲವಾಯಿತು ನನಗೆ! ನಾನಿನ್ನು ಚಿಕ್ಕನೆ ನಮ್ಮೂರಿಗೆ ಹೋಗುತ್ತೇನೆ. ಇನ್ನು ನಿಮ್ಮೂರಿನ ದಿಕ್ಕು ನೋಡಿದರೆ ನಾನು ಹೆಣ್ಣೆ! ಅಲ್ಲ ಮತ್ತೆ! ದೊಡ್ಡ ದೊರೆ ತಾನು ಎಂಬ ಹೆಮ್ಮೆಯಿಂದ ನಮ್ಮ ಮಾನಭಂಗಮಾಡುತ್ತಾನಲ್ಲ ಈ ಭಾವ!"

ಅಳುವಹಾಗೆ ಮುಖಕಿರಿದು ಮಾಡಿಕೊಳ್ಳುವಳು. ತಲೆಬಾಗಿ ಕಣ್ಣು ಹೊಸೆಯುವಳು. ಒಳಗೆ ಸಂತೋಷ. ಕಣ್ಣಲ್ಲಿ ನೀರಿಲ್ಲ. ಸುಳ್ಳುಸುಳ್ಳೇ ಬಿಕ್ಕುತ್ತ ಮಾತನಾಡುವಳು. ಓರೆಗಣ್ಣಿಂದ ಅರಸನನ್ನು ಕದ್ದು ನೋಡುವಳು. ಅವನ ಕಣ್ಣು ಕಂಡಕೂಡಲೆ ಮುಖ ಮರೆಮಾಡಿಕೊಂಡು ನಗುವಳು.

ರಾಜ ಗಮನಿಸಿದ. ಮುಗುಳು ನಕ್ಕ. ಕುಸುಮಾಜಿಗೆ ಕಣ್‌ಸನ್ನೆ ಮಾಡಿದ. 'ಎಲಾ, ಹುಡುಗಿಯ ಠಕ್ಕಿನ ಅಳುವೇ!' ಎಂದು ಅರಸಿ ಬೆರಗಾಗಿ ನೋಡಿದಳು.

"ಏಕೆ ಇಷ್ಟು ವ್ಯಾಕುಲ, ಮಕರಂದೆ?" ಎಂದಳು.

"ಹೋಗಕ್ಕ. ನಿನ್ನಿಂದ ನಾನು ಮರ್ಯಾದೆ ಕೆಟ್ಟೆ."

"ಏಕೆ, ತಂಗಿ? ಏನಾಯಿತೇ ನಿನಗೆ ಕೊರತೆ?"

"ಇದೇನು, ಅಕ್ಕ, ಹೀಗೆ ಹೇಳುತ್ತಿ! ನೀನೇನು ಜಾತಿಕ್ಷತ್ರಿಯಸ್ತ್ರೀರ ಹೆಣ್ಣೋ? ಅಥವಾ ವೈಶ್ಯ ಜಾತಿಯೊ? ಇಲ್ಲವೆ ಶೂದ್ರಸ್ತ್ರೀಯೊ? ಪರ ಪುರುಷನು ಒಲಿದು ಅಪ್ಪಿದರೆ, ಅದು ನಾರಿಗೆ ಸಹಜವಲ್ಲವೆ, ಅಕ್ಕ!"

"ಬಿಡೆ, ಬಿಡೆ. ನಿನ್ನ ಭಾಷಣದ ಎದುರಿಗೆ ಈ ಆಟ ಏನೂ ನಡೆಯುವುದಿಲ್ಲ. ನಿನ್ನ ಕಣ್ಣಿನಲ್ಲಿ ನೀರು ಕಂಡು, ಅಯ್ಯೋ ಪಾಪ ಎನ್ನುತ್ತಿದ್ದಾರೆ, ನೋಡು."

ಕೂಡಲೆ, ಕಣ್ಣಲ್ಲಿ ನೀರಿಲ್ಲವೆಂಬುದನ್ನು ಜ್ಞಾಪಿಸಿಕೊಂಡು, ಒಂದೆರಡು ಸಲ ರೆಪ್ಪೆ ಹೊಡೆದಳು, ಮಕರಂದೆ. ಎರಡು ಹನಿ ಕಾಣಿಸಿಕೊಂಡಿತು.

"ಭಲಾ!" ಎಂದ, ಅರಸ.

"ನಮ್ಮ ಅರಸನ ಮುಂದೆ ಹೆಣ್ಣುಮಕ್ಕಳಿಗೆ ದುಃಖದ ಕಣ್ಣೀರು ಎಂದೂ ಬರುವುದಿಲ್ಲ. ಇದು ಸುಮ್ಮಾನದಿಂದ ಬಂದ ಕಂಬನಿ. ಇದು ಆನಂದಬಾಷ್ಪ" ಎಂದಳು, ಕುಸುಮಾಜಿ.

"ನೀನು ನಿನ್ನ ಗಂಡನನ್ನು ಬೇಕಾದ ಹಾಗೆ ವರ್ಣಿಸು. ಅವನನ್ನು ಕಂಡರೆ ನನಗೆ ಸೇರುವುದಿಲ್ಲ. ನೋಡಿದ್ದೆಯಲ್ಲಾ, ನಿನ್ನ ಗಂಡನ ಆಟವನ್ನ!"

"ಸಾಕೆ, ನಿನ್ನ ಚೇಷ್ಟೆ. ಗಿಳಿಯ ಮೂಲಕ ನೀನು ಆಡಿಸಿದ ಮಾತು ಮೂರು ಲೋಕಗಳಿಗೂ ಗೊತ್ತಿದೆ. ಈ ಮೋಸ ಅರಸನ ಹತ್ತಿರ ನಡೆಯುವುದಿಲ್ಲ" ಎಂದು ಆ ಅಕ್ಕ ಆ ತಂಗಿಯನ್ನು ನಾಚಿಸಿದಳು.

"ಗಿಳಿಯ ಮಾತಿನ ಮರೆಯಲ್ಲಿ ಆಡಿದವರು ಯಾರೆಂದು ಈ ಭಾವ ಕಂಡುಹಿಡಿದುಬಿಟ್ಟನಲ್ಲಾ!" ಎಂದು ಮಕರಂದಾಜಿ ಮೆಚ್ಚಿದಳು. ಕಳ್ಳ ಅಳುವನ್ನು ನಿಲ್ಲಿಸಿದಳು. ತಲೆಬಾಗಿಸಿ ಕಿರುನಗೆ ನಗುತ್ತ ನಿಂತಳು.

ಅರಸನು ತಾನು ತಿಂದು ಮಿಕ್ಕಿದ್ದನ್ನು ಕೊಟ್ಟರೆ, "ಥೂ! ಥೂ!" ಎಂದು ಉಗುಳಿದಳು. ತುಟಿಯನ್ನು ತೊಡೆದುಕೊಂಡಳು. ಎಂಜಲು, ಎಂದಳು.

"ಎಂಜಲು ಎನ್ನುತ್ತೀಯಾ, ಧೂರ್ತೆ! ಅದು ಸಂಜೀವನದ ರಸ" ಎಂದು ಅಕ್ಕ ಹೇಳಿದರೆ, "ಅದು ನಿನಗೆ ಸಂಜೀವನ. ನನಗಲ್ಲ" ಎಂದು, ಚಿನ್ನದ ಗಿಂಡಿಯ ಜಲದಿಂದ ಅರಸನು ಕಾಣುವ ಹಾಗೆಯೇ ಬಾಯಿ

ಮುಕ್ಕುಳಿಸಿ ಉಗುಳಿ, "ಜಿನ! ಜಿನ!" ಎಂದು ಜಪಿಸಿದಳು.

ಹೆಣ್ಣು ಇಷ್ಟು ಕಣ್ಣುಮುಚ್ಚುವಳು. ಇಷ್ಟು ಧ್ಯಾನಿಸುವಳು. ಇಷ್ಟು ತುಟಿ ಪಿಟಿಪಿಟಿ ಎಂದು ಜಪಿಸುವಳು. ಕಣ್ಣು ತೆರೆದು ಭಾವನನ್ನು ನೋಡುವಳು. ನೋಡಿದ ಕೂಡಲೆ ನಾಚಿ, ತಲೆ ತಗ್ಗಿಸುವಳು.

"ಸಾಕು, ಸಾಕೆ, ನಿನ್ನ ಆಟ. ನಮ್ಮ ಅರಸನ ಎಂಜಲು ಸೋಕಿದಾಗ ನಿನ್ನ ಕುಲಕೋಟಿ ಪಾವನವಾಯಿತು!" ಎಂದಳು ಕುಸುಮಾಜಿ.

"ಇದು ಏನು ಮಾತು, ಅಕ್ಕ? ನೀನು ಈತನಿಗೆ ಇಷ್ಟು ಸೋತು, ತವರುಮನೆಯನ್ನು ಹೀನಯಿಸುವೆಯಲ್ಲಾ! ಈ ದೊರೆ ಆಳುವಷ್ಟು ನೆಲ ನಮ್ಮವರಿಗಿಲ್ಲದಿರಬಹುದು; ಆದರೆ ನಮ್ಮ ವಂಶಕ್ಕೆ ಏನು ಕಡಿಮೆ? ತನ್ನ ಪ್ರಿಯನಿಗೆ ತಾನು ಒಲಿದು ಸುಖವಾಗಿರಬೇಕು, ನಿಜ. ಆದರೆ ಅದಕ್ಕಾಗಿ ಉಳಿದವರನ್ನು ಕ್ಷೀಣವಾಗಿ ಕಾಣುವುದು ಸರಿಯಲ್ಲ" ಎಂದಳು, ತಂಗಿ.

ಅವಳಿಗೆ ಭಾವನ ರೂಪ ಕುಲ ಶೀಲ ಎಂದರೆ ಬಲು ಮೆಚ್ಚಿಕೆ. ಆದರೂ ತನ್ನ ಹೃದಯವನ್ನು ಬಿಟ್ಟುಕೊಡದೆ, ತವರೂರಿನ ಹೆಚ್ಚುಗಾರಿಕೆಗೆ ಹಾಗೆಂದಳು.

"ನೀನೇ ಹೇಳಕ್ಕ. ಸಣ್ಣ ಐಶ್ವರ್ಯದ ರಾಜನ ಮಗಳು ದೊಡ್ಡ ರಾಜನಿಗೆ ರಾಣಿಯಾದರೆ, ತಾನು ತನ್ನ ಜಾಣತನದಿಂದ ತವರೂರನ್ನು ಆತನಿಗೆ ಜೋಡಿಯಾಗಿ ಕಾಣಿಸಬೇಕು. ಬಡದೊರೆಯ ಮಗಳು ಬಲುದೊರೆಯ ಕೈಹಿಡಿದರೆ, ಆ ಮನೆಯನ್ನು ಈ ಮನೆಗೆ ಸರಿಯಾಗಿ ನಡಸಬೇಕು. ಹುಟ್ಟಿದ ಮನೆ, ಹೊಕ್ಕ ಮನೆ ಎರಡನ್ನೂ ಸರಿಗಟ್ಟಿಸಬೇಕು. ಇವು ರಾಜಪುತ್ರಿಯರ ಲಕ್ಷಣಗಳು. ನೀನು ಇವೆಲ್ಲವನ್ನೂ ಬಿಟ್ಟು, ನಿನ್ನ ರಾಜನನ್ನೇ ಘನವೆಂದು ಹೊಗಳುತ್ತಿದ್ದೀಯಲ್ಲ, ಕುಸುಮಾಜಿ — ಹೇಳು, ಇದು ದೊಡ್ಡತನವೆ?"

ಅದಕ್ಕೆ ಅಕ್ಕ ಹೇಳಿದಳು:

"ಹೌದಮ್ಮ, ತಂಗಿ. ಆ ಜಾಣತನದ ಗುಣ ನಿನಗೆ ಗೊತ್ತು. ನೀನು ಒಬ್ಬ ರಾಜನ ಕೈಹಿಡಿದಾಗ ನಿನ್ನ ತಾಯಿತಂದೆಯರ ದೊಡ್ಡತನವನ್ನು

ಅಲ್ಲಿ ತೋರಿಸು. ಆ ಒಣಹೆಮ್ಮೆ ನನಗೆ ಬಾರದು. ನಾಡಾಡಿಗಳಿಗೆ ನಾಡಾಡಿಗಳನ್ನು ಹೋಲಿಸಿ ಸರಿಮಾಡಬಹುದು. ಆದರೆ, ನಾಡೆಲ್ಲವನ್ನೂ ಒಂದೇ ಕೊಡೆಯ ನೆರಳಲ್ಲಿ ಕೊಂಡು ಆಳುವವನಿಗೆ ಯಾರನ್ನು ಸರಿಯೆಂದು ಹೇಳಬಹುದು ? ಮೊದಲನೆಯ ತೀರ್ಥಂಕರನ ಮಗನೂ, ಮೊದಲನೆಯ ಚಕ್ರವರ್ತಿಯೂ ಕಟ್ಟಕಡೆಯ ಮನುವೂ ಆದ ಈ ರಾಯನಿಗೆ ಯಾರನ್ನು ಸರಿಯಿಡಬಹುದೆ? ಹೊರಗಿನ ರೂಪಗುಣಗಳನ್ನು ಕಂಡು ಮೆಚ್ಚುವ ಕುರುಬರಿಗೆ ಕುರುಬರನ್ನು ತಂದು ಹೋಲಿಸಬಹುದು. ಆದರೆ, ಆತ್ಮತತ್ತ್ವವನ್ನು ಮೆಚ್ಚಿ ಸುಖಿಸುವ ಈ ನಮ್ಮ ಸ್ವಾಮಿಗೆ ಎಣೆ ಯಾರು ಉಂಟು ? ಬಿಡು, ಬಿಡು. ನಿನ್ನ, ನಿನ್ನ ತವರೂರಿನ ಮಾತನ್ನು ಇಲ್ಲಿ ಆಚೆ ಕಟ್ಟಿಡು ! ”

ಅದಕ್ಕೆ ತಂಗಿ ಉತ್ತರ ಹೇಳಿದಳು :

“ ಅಕ್ಕ, ರಾಜನೆಂಬ ಹೆಸರಿನ ಈ ವೇಷದ ಮಾಯಕಾರ ನಿನಗೆ ಏನು ಮಂತ್ರ ಹಾಕಿದ್ದಾನೆಯೋ! ಅವನಲ್ಲದೆ ಬೇರೆ ಇಲ್ಲವೇ ಇಲ್ಲನಲ್ಲ, ನಿನ್ನ ಹೃದಯದಲ್ಲಿ! ಆಯ್ತು, ನಿನ್ನಿಂದ ನಮ್ಮ ಮಾನಹಾನಿಯಾಯಿತು.

“ ಮನಸ್ಸನ್ನು ಈತನಿಗೆ ನೀ ಮಾರಿಬಿಟ್ಟೆ. ಇಂದ್ರಿಯಗಳ ಅನುರಾಗವನ್ನು ಇವನಿಗೆ ಸೂರೆಯಿತ್ತೆ. ದೇಹದ ದಂಡವನ್ನುತೆತ್ತೆ. ನಿನ್ನ ಸುಖದಲ್ಲಿ ನೀನು ಮಗ್ನಳಾಗಿ, ತವರೂರನ್ನು ಬಿಟ್ಟುಕೊಟ್ಟೆ.

“ ವೀಳೆಯದಲ್ಲಿ ಏನಾದರೂ ಮದ್ದುಂಟೊ ? ಅಥವಾ, ನಿನ್ನ ಅರಸನ ತೋಳಿನಲ್ಲಿ ಏನಾದರೂ ವಶ್ಯಯಂತ್ರವುಂಟೊ ? ಇಲ್ಲನೆ, ಈತನ ತಿಲಕದಲ್ಲಿ ಏನಾದರೂ ಮಂತ್ರದ ಶಕ್ತಿಯುಂಟೊ ? ಇಲ್ಲದಿದ್ದರೆ ನೀನು ಹೀಗೆ ಸೋತು ಸಿಕ್ಕುತ್ತಿದ್ದೆಯಾ ?

“ ಸುಳ್ಳಲ್ಲ, ಅಕ್ಕ. ಆಗ ನನ್ನನ್ನು ಈತ ಇಪ್ಪ ಅಪ್ಪಿದಾಗ ಎದೆ ಜುಮ್ಮೆಂದು ಢಿಳ್ಳನೆ ದಿಗಿಲಾಯಿತು. ನಸುಮುತ್ತು ಕೊಡುವಾಗ ಮೂರ್ಛೆ ಬಂದಂತಾಯಿತು. ನಾನಾದರೂ ಸಾಹಸದಿಂದ ಬೀಳದೆ ನಿಂತೆ.

“ ನೋಡಕ್ಕ. ಮಾನಹಾನಿಯನ್ನು ನೆನೆದು ಅತ್ತರೂ ನನಗೆ ಈಗ ಕಣ್ಣೀರು ಬಾರವು. ಏನು ಹೇಳುತ್ತೀ, ನಿನ್ನ ಗಂಡನ ಮಾಯವನ್ನ ! ಇವನಿಗೆ ನೀನು ಒಲಿಯುವುದು ಏನು ಸೋಜಿಗ ! ”

೪

ಅವಳು ಕುಸುಮಾಜಿಯೊಡನೆ ಮಾತನಾಡುತ್ತಿದ್ದ ಗಮಕದ ನುಡಿಯನ್ನು ರಾಜನು ಕೇಳಿ ಆನಂದಿಸಿದನು. ಅವಳ ಮೇಲೆ ಅವನಿಗೆ ಮನಸ್ಸಾಯಿತು. "ಅಲ್ಲಾ! ಈ ಮುರುಕ-ಮುನಿಸು ಲಜ್ಜೆ ಗಂಭೀರ ಜಾಣ್ನುಡಿ ಕಡೆಮಾತು ಭಯಭಕ್ತಿ ಗರ್ವ - ಇವನ್ನೆಲ್ಲ ಎಲ್ಲಿ ಕಲಿತಳೋ! ಇವಳಿಗೆ ಇನ್ನೂ ನೆರೆಯುವ ಯೌವನವಲ್ಲದೆ, ಇದು ನಿಂತ ಯೌವನವಲ್ಲ. ರತಿಸುಖದ ಗುರುತು ತಿಳಿಯದ ಈ ವಯಸ್ಸಿನಲ್ಲಿಯೇ ಇವಳು ಹೀಗಿರಬೇಕಾದರೆ, ಮುಂದೆ ಮದುವೆಯಾಗಿ ಮನೆಗೆ ಬಂದರೆ ಹೇಗಿರುವಳೊ! ಎಳೆಯ ಮೊಳೆಯಲ್ಲಿಯೇ ಹೀಗೆ ನೊಂದು ಕೂಗುವ ಇವಳು ಇನ್ನು ಎಲೆಬಿಟ್ಟಮೇಲೆ ನಮ್ಮನ್ನು ಬಾಳಗೊಡಿಸುವಳೆ!" ಎಂದು ಮೊರೆ ಮೆಚ್ಚಿಮೆಚ್ಚಿ ತಲೆಯನ್ನು ತೂಗಿದನು.

"ನಿಜ, ಕುಸುಮಾಜಿ. ಪಾಪ, ನೊಂದಿದ್ದಾಳೆ. ಮಕರಂದಾಜಿಯನ್ನು ಕರೆ. ಮನ್ನಣೆಮಾಡಿ ಸಂತೈಸೋಣ."

"ಬಾ, ತಂಗಿ" ಎಂದಳು ಅಕ್ಕ.

"ಹೋಗು, ನಾಕು. ಮೊದಲು ಒಮ್ಮೆ ನಿನ್ನ ವಲ್ಲಭನ ಹತ್ತಿರ ಹೋಗಿ, ನಾನು ಮನ್ನಣೆ ಪಡೆದದ್ದಾಯಿತು. ನನಗೆ ಚೆನ್ನಾಗಿ ಬುದ್ಧಿ ಬಂತು" ಎಂದು ತಂಗಿ ಹುಸಿಕೋಪದಿಂದ ಅಕ್ಕನನ್ನು ಗದರಿದಳು.

"ಮೊದಲ ಮನ್ನಣೆ ನಿನ್ನನ್ನು ನೋಯಿಸಿದ್ದರೆ, ಈಗ ಅದನ್ನು ಮೀರಿಸುವ ಮನ್ನಣೆ ಕೊಡುತ್ತೇನೆ, ಬಾ."

"ಬೇಡ ಭಾವಾ! ನನಗೆ ಕೋಪ ಬರಿಸಬೇಡ. ನೀನೂ ಒಬ್ಬ ದೊಡ್ಡ ಮಾನವಂತ! ಮಾನಿನಿಯರನ್ನು ಕಂಡರೆ ಅಪ್ಪಿಕೊಳ್ಳುವುದೇ ನಿನಗೆ ಸದಾ ಧ್ಯಾನ! ಹೆಣ್ಣುಗಳಿಗೆ ಏನು ಕಡಮೆ ನಿನಗೆ? ಅಂತಃಪುರದ ತುಂಬ ಇರುವರಲ್ಲ. ಒಲಿದು ಒಡಂಬಟ್ಟವರನ್ನು ಅಪ್ಪುವುದು ಆಗಬಹುದು; ಆದರೆ, ಕಂಡ ಹೆಂಗಸರನ್ನು ಬಾಚಿಹಿಡಿದು ತಬ್ಬಿಕೊಳ್ಳುವ ನಿನಗೆ ಏನು ಹೇಳೋಣ! ಬಿಡಿಸಿಕೊಳ್ಳಲು ಮಿಸುಕುವವರನ್ನು ಬಿಗಿಹಿಡಿದು, ಅವರು ಮುಖ ಅಡ್ಡತಿಗೆದರೂ ಬಿಡದೆ ಚುಂಬಿಸುವ ನಿನ್ನನ್ನು ಕಂಡರೆ, ನನಗೆ ಹುಚ್ಚುನಗೆ ಬರುತ್ತದೆ!"

— ಎಂದು ಮಕರಂದಾಜಿ ಕಿಲಕಿಲನೆ ನಕ್ಕು, ಮೋರೆ ಅಡ್ಡಮಾಡಿದಳು. ದೊರೆಯ ಎದುರಿಗೆ ತಿರುಗಿ, ಆವನನ್ನು ಹಂಗಿಸಿದಳು. "ಇದು ನಿನಗೆ ದೊಡ್ಡತನವೆ, ಭಾವಾ?" ಎಂದು ಮೂದಲಿಸಿದಳು.

ರಾಜನು ಅದನ್ನು ಲಕ್ಷಿಸದೆ ಸುಮ್ಮನೆ ಕುಳಿತಿದ್ದನು.

ಕುಸುಮಾಜಿಗೆ ಅರ್ಥವಾಯಿತು — ದೊರೆಗೆ ನಾದಿನಿಯಲ್ಲಿ ಚಿತ್ತ ಬೆಸುಗೆಯಾಯಿತೆಂದು. ಆದರೂ ತನಗಿದ್ದ ಪುರುಷಭಕ್ತಿಯಿಂದ ತಾನು ಅದನ್ನು ಉಸಿರದೆ, ಆ ಹುಸಿಜಗಳವನ್ನು ನೋಡುತ್ತಿದ್ದಳು.

"ಎಲೆ, ಧೂರ್ತೆ! ಮನ್ನಣೆಕೊಡುತ್ತೇವೆಂದು ನಾವು ಕರೆದರೆ, ನೀನು ನಮ್ಮನ್ನು ದೂರುವುದೇಕೆ?" ಎಂದ, ದೊರೆ.

"ಹೋಗು, ಖಳಧೂರ್ತ! ನಿನ್ನ ಮನ್ನಣೆ ನಿನಗೇ ಇರಲಿ."

"ಹೌದು, ಹೌದೇ! ನಾನು ಧೂರ್ತ, ನೀನು ಧೂರ್ತೆ! ಎಂದರೆ, ಅರ್ಥವೇನಾಯ್ತು? ಆಗಬಹುದೇನು?"

ರಾಜನು ಓರೆನೋಟವನ್ನು ಚೆಲ್ಲಿದನು. ಮಕರಂದಾಜಿ ಕಟಾಕ್ಷವನ್ನು ಕೆದರಿದಳು.

"ನಿನ್ನ ಗಂಭೀರ ಗರ್ವ ಎಲ್ಲಿ ಹೋಯಿತು, ಭಾವಾ? ಏನು, ಚೆಲ್ಲಾಟವಾಡಲು ಇಷ್ಟವಾಯಿತೇನು! ಸಭೆಯಲ್ಲಿ ಕುಳಿತಾಗ, ನಾಲ್ಕೆಂಟು ಮಾತು ಕೂಡ ನಿನಗೆ ದುರ್ಲಭ! ಅಂಥವನು ಈಗೇನು — ಬಹು ವಚನ ಸುಲಭನಾದೆಯಲ್ಲಾ!" ಎಂದು ಮಕರಂದಾಜಿ ಜರೆದಳು.

ಅವಳು ಏನೆಂದರೂ ಅದು ರಾಜನಿಗೆ ಸವಿ.

"ನೊಂದಳು, ಪಾಪ, ಎನ್ನಿಸಿತಷ್ಟೆ. ಮನ್ನಣೆ ಕೊಡೋಣ, ಎಂದು ಕರೆದೆನಷ್ಟೆ!" ಎಂದ.

ಅದಕ್ಕೆ ಅವಳು ದೂರದಲ್ಲಿ ನಿಂತು, "ಹಿಂದೆ ನೀನು ಕೊಟ್ಟದ್ದೇ ಭಾರವಾಗಿದೆ ನನಗೆ! ಇವನ್ನು ನೀನೇ ತೆಗೆದುಕೊ" ಎಂದು ಆ ಕಾಮಿನಿ ತನ್ನ ಕೊರಳಿನ ಸರವನ್ನು ತೆಗೆಯಲು ಹೋದರೆ, ಅದು ಬರಲಿಲ್ಲ. "ಓಹೋ! ಈ ಭಾವ ಏನೋ ಸ್ತಂಭನೆಮಾಡಿದ್ದಾನೆ!" ಎಂದು ಒಳಗೊಳಗೇ ಉಬ್ಬಿ ನಕ್ಕಳು. ಏನೂ ಅರಿಯದವಳ ಹಾಗೆ ಭಾವನ ಮುಖವನ್ನು ವಿಸ್ಮಯದಿಂದ ನೋಡುತ್ತ ನಿಂತಳು.

"ಈ ಕೊರಳ ಹಾರ ಏಕೆ ಬಾರದು, ಭಾವ? ಇದೂ ನಿನ್ನ ಹಾಗೆಯೇ, ಅಂಟಿದರೆ ಬಿಡುವುದಿಲ್ಲ. ನೋಡು, ಬೇಡವೆಂದರೂ, ಸಾಕು ಎಂದರೂ, ಹತ್ತಿಕೊಂಡಿದೆ!"

"ಕೊಡುವಾಗ, ಮಕರಂದೆ, ಕೊರಳಿಗೊಂದು ಎದೆಗೊಂದು ಬಾಯಿಗೊಂದು ನಾನು ಕೊಟ್ಟರೆ; ನೀನು ಎರಡನ್ನು ಉಳಿಸಿಕೊಂಡು, ಒಂದನ್ನು ಮಾತ್ರ ಕೊಡುವೆನೆಂದರೆ, ಅದು ಒಪ್ಪುವುದೆ, ಹೇಳು. ಅಲ್ಲದೆ, ನಾವು ಕೊಟ್ಟ ಒಡವೆಯನ್ನು ತೆಗೆದುಕೊಳ್ಳುವವರಲ್ಲ. ಮುಟ್ಟೆದಿರು. ಅದು ನಿನ್ನ ಮೈಮೇಲೇ ಇರಲಿ. ನೀನು ಈಗ ಅಂದು ಆಡಿದ ಹೆಚ್ಚುಕಡಿಮೆ ಮಾತುಗಳಿಗೆಲ್ಲ ನಾನು ತಕ್ಕದ್ದು ಮಾಡುತ್ತೇನೆ, ಕೇಳು. ಇನ್ನು ಆರು ತಿಂಗಳು ಸೈರಿಸು, ಮಕರಂದೆ. ನಿನ್ನ ಈ ಆಟವನ್ನೆಲ್ಲ ನಿಲ್ಲಿಸುತ್ತೇನೆ."

"ಯಾರನ್ನು ಬೆದರಿಸುತ್ತೀಯೆ, ಭಾವ! ಅದೇನು ಮಾಡುತ್ತೀ, ಹೇಳು."

"ಬಿಡಿಸಿ ಹೇಳಲೇಬೇಕೆ?"

"ಹೇಳಲೇಬೇಕು."

"ಕೇಳು, ನಿನ್ನನ್ನು ನಿನ್ನ ಅಕ್ಕನಿಗೆ ಸವತಿ ಮಾಡುತ್ತೇನೆ!"

ಮಕರಂದೆ ನಕ್ಕಳು. ಓಡಿದಳು. ಸಂಭ್ರಮದಿಂದ, ಸಂತೋಷದಿಂದ ಕಂಬದ ಮರೆ ಸೇರಿದಳು.

ಕುಸುಮಾಜಿಗೂ ಹರ್ಷವಾಯಿತು. "ತಂಗಿ, ಅರಸನ ಮಾತು ಸುಳ್ಳಾಗದು. ನಾಳೆ ಅಪ್ಪಾಜಿಯನ್ನು ಕರೆಸುತ್ತೇನೆ. ನಿನಗೆ ಮಂಗಲ ಮಾಡಿಸುತ್ತೇನೆ. ದೊರೆಯ ಕೈಯಲ್ಲಿ ನಿನ್ನ ಕೈ ಇರಿಸಿ, ತಂದೆಯ ಕೈಯಿಂದ ಧಾರೆಯೆರೆಸುತ್ತೇನೆ" ಎಂದಳು.

ತಂಗಿಯ ಒತ್ತಿಗೆ ತಾನೇ ಹೋಗಿ, "ತಂಗಿ, ಪುರುಷನಿಗೆ ಎದುರುತ್ತರ ಹೇಳಿದ ದೋಷವನ್ನು ಕಳೆದುಕೊ, ಹೋಗು. ನನಗೆ ಇಷ್ಟು ಹೊತ್ತೂ ನೀನೇ ಬುದ್ಧಿ ಹೇಳಿದೆ. ನಿನಗೇ ಗೊತ್ತಿಲ್ಲವೆ? ಹೋಗಿ, ಕಾಲು ಮುಟ್ಟಿ, ಮಾಡಿದ ದೋಷ ಕಳೆದುಕೊ" ಎಂದು ಕೈಹಿಡಿದು ಕರೆದಳು.

ಮಕರಂದಾಜಿ ಮನಸ್ಸಿಲ್ಲದ ಹಾಗೆ ಅತ್ತ ಇತ್ತ ಒಲೆದಾಡಿದಳು. ನಾಚಿದಳು. ಅಲ್ಲಲ್ಲೆ ನಿಂತಳು, ಬಲವಂತದಿಂದ ಅಕ್ಕ ತೆಗೆದೆಳೆದರೆ ಬಂದ

ಹಾಗೆ ಮೆಲ್ಲಗೆ ಬಂದು, ಎದುರಿಗೆ ನಿಂತಳು. ಎಲ್ಲಿ ಹೋಯಿತೋ – ಆ ಮೊದಲಿನ ನುಡಿ! ಆ ನೋಟ! ಚೆಲ್ಲಾಟ! ಆ ನಗೆಯ ಸೊಕ್ಕು! ನಲ್ಲನನ್ನು ನೋಡುತ್ತ ಅಂಜುತ್ತ ಲಜ್ಜೆಪಡುತ್ತ ಎಳೆಯ ಹುಲ್ಲೆಯಂತೆ ಇದ್ದಳು.

" ಕಾಲಿಗೆ ಎರಗು, ನಡೆ " ಎಂದಳು ಅಕ್ಕ.

ಮಕರಂದಾಜಿ ಮುಂದಕ್ಕೆ ಹೆಜ್ಜೆಯಿಡಲಿಲ್ಲ.

" ಹಾಗಾದರೆ, ಇಲ್ಲೆ ಎರಗು."

ನಿಂತಲ್ಲಿಯೇ ಹಾಗೆಯೇ ಬಾಗಿ ನಮಸ್ಕರಿಸಿದಳು.

" ತಪ್ಪಾಯಿತು, ಕ್ಷಮಿಸು, ಎಂದು ಕೇಳಿಕೋ, ತಂಗಿ."

" ಹೋಗಕ್ಕ, ನನ್ನದೇನು ತಪ್ಪು? ನಿನ್ನ ಪತಿ ನನ್ನ ಗಿಳಿಯ ತಂತ್ರವನ್ನು ತಪ್ಪದೆ ಹೇಳಿದ್ದಕ್ಕೆ ನಾನು ಎರಗಿದೆ, ಅಷ್ಟೆ. ಇದನ್ನು ಒಪ್ಪಿಸಿಕೊ" ಎಂದು ಮೇಲೆದ್ದಳು.

ಮನಸ್ಸಿನಲ್ಲಿ ಅಷ್ಟು ಉಲ್ಲಾಸವಿದ್ದರೂ ಮೈಯನ್ನು ಅಡಕಮಾಡಿಕೊಂಡು ತನಗೆ ಎರಗಿದ ಆ ಹೆಣ್ಣನ್ನು ಕಂಡು ರಾಜನಿಗೆ ಮೆಚ್ಚಿನ ಮೇಲೆ ಮೆಚ್ಚು.

" ಸಾಕು, ಇವಳೊಡನೆ ಆಟ. ಭೋಜನಕ್ಕೆ ವೇಳೆಯಾಯಿತು. ಮೇಲಣ ನೆಲಮಾಳಿಗೆಗೆ ಚಿತ್ತೈಸಬೇಕು" ಎಂದು ಕರೆದಳು, ಕುಸುಮಾಜಿ.

ದೊರೆ ಎದ್ದನು. ಬಳಿಯಲ್ಲಿದ್ದ ಅಮೃತವಾಚಕನ ಮೈಯನ್ನು ತಡವಿ, " ರಸಿಕನಯ್ಯಾ ನೀನು!" ಎಂದನು. ಆ ಹಕ್ಕಿಗೆ ಒಂದು ನವರತ್ನದ ಪಂಜರವನ್ನು ತರಿಸಿಕೊಟ್ಟನು. ತನ್ನ ಕಾಂತೆಯ ಕೈಹಿಡಿದು, " ಜಿನಸಿದ್ಧ, ಶರಣು!" ಎನ್ನುತ್ತಾ ಆ ರಾಯನು ಮೇಲಣ ಉಪ್ಪರಿಗೆಗೆ ನಡೆದನು.

# ಭಾಗ ಮೂರು: ಮೇಲಿನ ಉಪ್ಪರಿಗೆಯಲ್ಲಿ

## ೧

ಸತಿಯ ಕೈಯನ್ನು ಹಿಡಿದು ಭೂಪತಿಯು ಮೇಲಿನ ಉಪ್ಪರಿಗೆಗೆ ಹೋದನು. ಅಲ್ಲಿ ಆ ಮನೆಯ ಶೃಂಗಾರವನ್ನು ಕಂಡನು. ಕಂಡು, ಮನ್ಮಥನು ರತಿದೇವಿಯೊಡನೆ ನುಡಿಯುವಂತೆ ಲಲಿತವಾದ ಮಾತುಗಳನ್ನಾಡಿದನು :

"ಭಾಪು, ಕುಸುಮೆ! ನಿನ್ನ ಹೆಸರಿನ ಹಾಗೆಯೇ ಈ ಮನೆಯೂ ಕುಸುಮಗಳನ್ನು ಕೆದರಿ, ಕಣ್ಣಿಗೆ ಇಂಬಾಗಿದೆ. ಈ ಪೂರ್ಣವಾದ ಕುಸುಮ ಮಾಲೆಗಳನ್ನು ಮೇಲ್ಕಟ್ಟಿನಿಂದ ಹಬ್ಬಿಸಿರುವ ರೀತಿ ಚೆನ್ನಾಗಿದೆ....ಈ ನಡುವಿನ ಝುಲ್ಲಿಯ ಪಟ್ಟೆ ಪರ್ವತವನ್ನು ಎಲ್ಲಿಂದ ತರಿಸಿದೆ? ಹೇಳು, ನಲ್ಲೆ: ಮಾವಾಜಿಯವರ ಮನೆಯಿಂದ ಬಂದುವೊ ಇವು?....ಈ ಮುತ್ತು ಮಾಣಿಕಗಳ ಗೊಂಡೆ ಸೊಗಸಾಗಿದೆ! ಇದು ಎಲ್ಲಿಂದ ಬಂತು? ಅಳಿಯನ ಚಿತ್ತಕ್ಕೆ ಉತ್ಸವವಾಗಲಿ ಎಂದು ಅತ್ತೆಯವರು ಕಳುಹಿದರೇನು?....ಈ ಬಿಳುಪಾದ ಬಣ್ಣದ ಮೇಲ್ಕಟ್ಟು ಬಲು ಹೊಸತು! ಇದು ಎಲ್ಲಿಯದು, ಎಲೆ ಹೆಣ್ಣೆ? ತಂಗಿಯ ಕಣ್ಣಿಗೆ ತಂಪಾಗಲಿ ಎಂದು ಅಣ್ಣಂದಿರು ಕಳುಹಿದರೇನು?....ಈ ಹೊನ್ನಿನ ಹಾಸುಮಡಿ, ಬೆಳ್ಳಿಯ ಹೂಮಾಲೆ, ಬಂಗಾರದ ಹೊಮ್ಮುಗುಳಿನ ಮಾಲೆ – ಇವನ್ನು, ಅಕ್ಕನ ಸುಮ್ಮಾನಕ್ಕೆ ಇರಲೆಂದು, ತಮ್ಮಂದಿರು ಕಳುಹಿದರೊ?....ಈ ಸಾರಣೆ ಚೆನ್ನಾಯ್ತು, ಕುಸುಮೆ! ಈ ಕುಂಕುಮದ ಸಾರಣೆ ಚೆನ್ನಾಯ್ತು, ಕುಸುಮಿ. ತೋರಣ ಚೆನ್ನಾಯ್ತು, ಕುಸುಮು! ನಿನ್ನಾಣೆ!....ಈ ಚಿಮುಕಿಸಿರುವುದು ಲೇಸು, ಕುಸುಮಾಜಿ! ಈ ಹೊಸ ರಂಗವಲಿ ಲೇಸು, ಕುಸುಮಾಲೆ! ನಿನ್ನ ನಿಲಯದ ಸಿಂಗಾರ ಸೊಗಸಾಯ್ತು, ಕುಸುಮಕೋಮಲೆ!"

ಕುಸುಮು, ಕುಸುಮಿ, ಕುಸುಮರಾಜಿ, ಕುಸುಮೆ, ಕುಸುಮಾಂಗಿ, ಕುಸುಮಾಲೆ, ಕುಸುಮಿತಿ, ಕುಸುಮಿನಿ – ಎಂದು ಅನೇಕ ವಿಧವಾಗಿ ಅವಳನ್ನು ಸಂಬೋಧಿಸಿ, ರಾಯನು ಅವಳ ಕುಶಲವನ್ನು ಕೇಳಿದನು.

“ಈ ಮನೆಯೆಲ್ಲ ನವರತ್ನಗಳಿಂದಲೂ ಚಿನ್ನದಿಂದಲೂ ತುಂಬಿ ತುಳುಕುತ್ತಿದೆಯೆ! ನಾನು ಇಷ್ಟು ಬಹು ವಸ್ತುಗಳನ್ನು ನಿನಗೆ ಕೊಟ್ಟದ್ದಿಲ್ಲ. ಇವನ್ನು ಎಲ್ಲೆಲ್ಲಿಂದ ಸಂಗ್ರಹಿಸಿ ತರಿಸಿದೆ, ಹೇಳು. ತವರೂರಿನದೆ?” ಎಂದ.

ಅದಕ್ಕೆ ಅವಳೆಂದಳು: “ತವರೂರು ಗಿವರೂರಿನ ಹಂಗನ್ನು ನಾನರಿಯೆ. ನಮ್ಮ ದೊರೆಯ ಅರಮನೆಯಲ್ಲಿ ನವನಿಧಿಯುಂಟು. ಅದರ ಮುಂದೆ ಇದೇನು ಲೆಕ್ಕ!”

“ನನ್ನ ಮೇಲಿನ ಪ್ರೀತಿಯಿಂದ ನನ್ನ ತವರೂರನ್ನು ವರ್ಣಿಸಿ ಹೇಳುತ್ತಿದ್ದಾನೆ” ಎಂದು ಕುಸುಮರಾಜಿಗೆ ಹಿಗ್ಗು. “ಈ ರಾಯನು ಉಳಿದ ರಾಜರನ್ನು, ‘ಇವನು, ಅವನು’ ಎನ್ನುತ್ತಾನೆ. ಇಂಥವನು ನನ್ನ ತಾಯಿತಂದೆಯರನ್ನು ‘ಇವರು, ಅವರು’ ಎನ್ನುತ್ತಾನೆ!” ಎಂದು ಅವಳಿಗೆ ಸಂತೋಷ. “ಇತರ ರಾಜರನ್ನು ಸೇವಕರನ್ನು ಕರೆಯುವಂತೆ ಕರೆಯುವವನು ನನ್ನ ಹೆತ್ತವರನ್ನು ‘ಮಾವಾಜಿ, ಅತ್ತೆಯವರು’ ಎಂದು ಕರೆಯುತ್ತಾನೆ!” ಎಂದು ಉಬ್ಬಿದಳು.

ರಾಜನಾದರೂ ಅಷ್ಟೆ: ಏಕಾಂತವಾದ ಕಾರಣ ಪ್ರಿಯೆಯೊಡನೆ ತಾನು ಆಕೆಯ ತಾಯಿತಂದೆಗಳನ್ನು ಹಾಗೆ ತೂಕದಿಂದ ಮನ್ನಿಸಿದನಲ್ಲದೆ, ಲೋಕಾಂತದಲ್ಲಿ ಹಾಗೆ ಎಂದಿಗೂ ಹೇಳ. ‘ಹೆಣ್ಣಿನ ಮನಸ್ಸನ್ನು ನೋಯಿಸದೆ, ವಿನಯದಿಂದ ಪ್ರೀತಿಯನ್ನು ಪಡೆದರೇ ನೊಗನು’ ಎಂಬ ಅನುವನ್ನು ಅರಿತವನಾದ ಕಾರಣ, ಕಾಲೋಚಿತಕ್ಕೆ ತಕ್ಕ ಹಾಗೆ ಮಾತನಾಡಿದ.

ರಾಣಿಯಾದರೂ ಅಷ್ಟೆ: ಹೆಡ್ಡ ಹೆಣ್ಣುಗಳ ಹತ್ತಿರ ದೊರೆ ಏನಾದರೂ ಹಾಗೆ ನುಡಿದಿದ್ದರೆ, ಅವರು ಜಿಡ್ಡು ಉಬ್ಬಿ ಮುಂಡೆಗೇರಿಬಿಡುತ್ತಿದ್ದರು. ಆದರೆ ದೊಡ್ಡ ಜಾಣೆ ಆಕೆ; ಅರಸನಿಗೆ ತಾನು ಸರಿ ಎಂದು ಸೆಟೆದು ನಿಲ್ಲದೆ, ಕುಸಿದು ಮಾತನಾಡಿದಳು.

ಜಾಣ ಜಾಣೆಯರು ಆಡುವ ಆಟ – ಚದುರಂಗದ ಆಟ.

"ಮನೆಯ ಶೃಂಗಾರವೇನು ಅಷ್ಟರಲ್ಲಿಯೇ ಇದೆ! ದೇವರು ಇಂದು ನನ್ನ ಮನೆಗೆ ಬಂದದ್ದು – ಇದೇ ಪರಮಶೃಂಗಾರ! ಮಹಾಮಹಿಮನೆ, ಮಂಗಲಾಸನಕ್ಕೆ ಚಿತ್ತೈಸಬೇಕು" ಎಂದು ಕುಸುಮರಾಜಿ ಕರೆದಳು.

ಮಾಣಿಕ್ಯದ ಚಿನ್ನದ ತಟ್ಟೆ, ಬಟ್ಟಲು, ಹರಿವಾಣ, ಗಿಂಡಿ. ರತ್ನ ಮಯವಾದ ಸ್ಥಾನದೀವಿಗೆಗಳು. ಇವುಗಳು ಸುತ್ತಲೂ ಸಿಂಗಾರವಾಗಿರಲು, ನಡುವಿನ ಆಸನದಲ್ಲಿ ರಾಜನು ಒಪ್ಪವಾಗಿ ಕುಳಿತನು.

ಕುಸುಮರಾಜಿ ಎಲ್ಲರನ್ನೂ ಹೊರಗೆ ಹೊರಡಿಸಿದಳು. ಬಾಗಿಲಿನ ಹೊರಗೆ ಕಾವಲಿಗೆ ಒಬ್ಬಳನ್ನು ಕುಳ್ಳಿರಿಸಿದಳು. ತಾನು ಬಾಗಿಲನ್ನು ಇಕ್ಕಿ ಕೊಂಡು, ಗಂಡನ ಬಳಿಗೆ ಬಂದಳು.

"ಬಾಗಿಲು ಏಕೆ ಇಕ್ಕಿದೆ, ಕುಸುಮರಾಜಿ?" ಎಂದು ಏಕಾಂತದಲ್ಲಿ ಅರಸ ಕೇಳಿದ.

"ಅದನ್ನು ಆಮೇಲೆ ಹೇಳುತ್ತೇನೆ" ಎಂದಳು ಅರಸಿ, ಗುಟ್ಟಾಗಿ.

"ಓಹೊ! ಮೊದಲು ತಾನು ಗಿಳಿಯೊಡನೆ ಗುಟ್ಟಾಗಿ ಆಡಿದ್ದು ಬಹಿರಂಗವಾಯಿತು ಎಂದು, ಈಗ ಎಲ್ಲರನ್ನೂ ಹೊರಗಿರಿಸಿದ್ದಾಳೆ! ನಾನು ಕೇಳಿದರೆ, ನನ್ನಲ್ಲಿ ಮುಚ್ಚುಮರೆ ಮಾಡುವಳಲ್ಲ!" ಎಂದು ಅರಸು ಒಳಗೇ ಮೆಚ್ಚಿಕೊಂಡ.

ಚತುರೆಯಾದ ಕುಸುಮರಾಜಿ ಸಮುಖದ ಸೇವಕಿಯರನ್ನೆಲ್ಲ ಹೊರಗೆ ಕಳುಹಿಸಿ, ಎವೆಹಾರು ತನಗೆ ಸ್ವಲ್ಪವೂ ಇಲ್ಲವಂತೆ ಮಾಡಿಕೊಂಡು, ಉಕ್ಕುವ ಹರ್ಷದಿಂದ ತನ್ನ ಪತಿಗೆ ಎಡೆ ಬಡಿಸತೊಡಗಿದಳು. ತಾನೇ ತನ್ನ ಕೈಮುಟ್ಟಿ ತನ್ನ ವಲ್ಲಭನಿಗೆ ಅನ್ನಪಾನ ಶಾಕ ಪಾಕಗಳನ್ನು ಒಂದು ನಿಮಿಷದಲ್ಲಿ ಬಡಿಸಿದಳು. ಸ್ವರ್ಗದಲ್ಲಿ ಬಿತ್ತಿ ಬೆಳೆದ ಬತ್ತವನ್ನು ಮುಕ್ತಿ ಲೋಕದಲ್ಲಿ ಅಡಿಗೆಮಾಡಿ ತಂದು ಸಂಭ್ರಮದಿಂದ ಬಡಿಸುವ ಪುಣ್ಯ ಲಕ್ಷ್ಮಿಯೋ ಎಂಬಂತೆ ಅನ್ನವಿಕ್ಕಿದಳು. ಕಲ್ಪವೃಕ್ಷದ ಕುಡಿಯಂತೆ ಕೈನೀಡಿ ಮೇಲೋಗರ, ಉಪ್ಪಿನಕಾಯಿ, ಹಪ್ಪಳಗಳನ್ನು ಬಡಿಸಿದಳು. ಎಳೆ ಮಿಂಚನ್ನು ಎರೆಯುವಂತೆ ತಿಳಿತುಪ್ಪವನ್ನೆರೆದಳು. ಬಿಳಿಯ ಮೋಡದಂತಹ ಮೊಸರನ್ನು ಕಮಲದಂದದ ಬಟ್ಟಲುಗಳಲ್ಲಿ ತುಂಬಿ ಇಟ್ಟಳು. ಕ್ಷೀರಸಮುದ್ರದ ನೊರೆಯ ಉಂಡೆಯನ್ನು ತಂದು ಸೇರಿಸುವಂತೆ ತಿಳಿಬೆಳಗಿನ ಕಜ್ಜಾಯವನ್ನು

ಎಡೆಮಾಡಿದಳು. ಮುಪ್ಪಾದವರು ಒಮ್ಮೆ ಸವಿದರೆ, ಅವರಿಗೆ ಕ್ಷಣದಲ್ಲಿ ತುಪ್ಪುಳು ಮೀಸೆಯನ್ನು ಮಾಡಿ, ದಪ್ಪವೇರಿಸುವ ಶಕ್ತಿಯನ್ನುಳ್ಳ ಹೆರೆ ತುಪ್ಪವನ್ನು ಬಡಿಸಿದಳು. ಬಟ್ಟೆಹಾಲು, ಚಿಲುಹಾಲು, ಕೆನೆಹಾಲು, ಎಟ್ಟಿಹಾಲು, ತನಿಹಾಲು ಮುಂತಾದ ತರತರದ ಹಾಲುಗಳನ್ನು ಬಟ್ಟಲು ಬಟ್ಟಲು ತುಂಬಿ ತಂದು ಎಡೆಮಾಡಿದಳು. ಪಕ್ವವಾದ ಹಣ್ಣುಗಳಿಂದ ಆಗಿ, ಪರಿಮಳ ಘಮಘಮಿಸುತ್ತಿರುವ ಸಾರಸಾಯನಗಳನ್ನು ತಂದು ತಂದು ಬಡಿಸಿದಳು. ಸಕ್ಕರೆಯನ್ನು ಹಿಡಿಯಲ್ಲಿ ತಂದಾಗ, ಅದು ಅಂಗೈಯ ಸಂಪರ್ಕದಿಂದ ಸಿಂಧೂರದ ಹಾಗೆ ಕಾಣಿಸಿದರೆ; ಆ ರಾಣಿ ಶಂಕೆಯಿಂದ ಕೈತೆಗೆದು ನೋಡಿ, ಮತ್ತೆ ಸಕ್ಕರೆಯನ್ನು ತಂದು ನೀಡಿದಳು. ಹೀಗೆ ಪರಮಾನ್ನವನ್ನೂ ಪರಿಪರಿಯ ಪಕ್ವಫಲಗಳನ್ನೂ ದೊರೆಗೆ ಇಕ್ಕಿ, ಆರತಿ ಯೆತ್ತಿ, ನಸುನಗುತ ಕುಸುಮಾಜಿ ಬೊಗಸೆಯ ಹೂಗಳನ್ನು ಅರಸನ ಮೇಲೆ ಚೆಲ್ಲಿ, ಪ್ರೀತಿಯಿಂದ ಕೈಮುಗಿದು ಒಂದುಕಡೆ ನಿಂತಳು.

ಹಣೆಯ ತಿಲಕ, ತಲೆಯ ತುರುಬು, ಎದೆಯ ಯಜ್ಞಸೂತ್ರ, ಕಿವಿಯ ಕುಂಡಲ, ಮೈಯ ಧೋತ್ರ ಇವು ಹೊರತು ಮಿಕ್ಕವನ್ನು ತೊಲಗಿಸಿ, ರಾಜನು ಮೊದಲು ಕೈತೊಳೆದುಕೊಂಡನು. ಅನಂತರ, ಸಿದ್ಧರನ್ನು ಮಾನಸಿಕವಾಗಿ ಪೂಜಿಸಿ ಕಳುಹಿ, ಸಿದ್ಧಾಂತದಲ್ಲಿ ಹೇಳಿರುವ ಪ್ರಕಾರವಾಗಿ ನಿರಂಜನಸಿದ್ಧನಿಗೆ ಅನ್ನಪಾನಗಳನ್ನು ಒಲಿದು ಅರ್ಪಿಸಿ, ಜಲಶುದ್ಧಿಯನ್ನು ಕುಡಿದನು.

ಆ ಹೊತ್ತಿಗೆ ಆ ಮನೆಯ ಬಾಗಿಲ ಕಾವಲುಗಂಟೆ ಹೊಡೆಯಿತು. ಅರಸನು ಹರಿವಾಣದಲ್ಲಿ ಹಸ್ತವನ್ನಿಟ್ಟ. ಪರಮಾತ್ಮನಿಗೆ ಅರ್ಪಿಸಿದ ಅನ್ನಪಾನಗಳನ್ನು ತನ್ನ ಮೈಗೆ ಊಡಿಸಿದ.

ಭೇದವಿಜ್ಞಾನದಿಂದ ಆತ್ಮನನ್ನು ತೆಗೆದು, ಮತ್ತೆ ಆ ದೇಹದ ಮಧ್ಯ ದಲ್ಲಿಟ್ಟು, "ಈ ದೇಹಕ್ಕೆ ಈ ತುತ್ತು ಕೊಡಲೆ, ಚಿನ್ಮಯನೆ?" ಎಂದು ಅಪ್ಪಣೆ ಬೇಡಿ, ಆದರಿಸುತ್ತ ತುತ್ತು ಕೊಟ್ಟ.

"ಕರ್ಮದ ಆಹಾರ ಕೊಟ್ಟರೆ ನಿನಗೆ ಭಾರವಾಗುವುದಲ್ಲದೆ, ನಿರ್ಮಲ ಜ್ಞಾನ ಕವಳಾಹಾರವು ನಿನಗೇನು ಮಾಡುವುದು? ನೀನು ಸ್ವರ್ಗ ಮೋಕ್ಷಗಳಿಗೆ ಒಡೆಯನಲ್ಲವೆ!........ಮನಸ್ಸು, ಪಂಚೇಂದ್ರಿಯ, ದೇಹ, ಮಾತು, ಇವೆಲ್ಲ

ಜಡ. ಪಾಪವಲ್ಲದ ಈ ಅನ್ನ, ಪಾಪ, ಇದೂ ಜಡ. ಜಡ ಜಡಕ್ಕೆ ಸೇರಿದರೆ, ನಿನಗೆ ಏನೂ ಕುಂದಿಲ್ಲ, ಚೈತನ್ಯನೇ!........ಹಿಂದೆ ನೀನು ಮಾಡಿದ ಅಖಂಡವಾದ ಪುಣ್ಯವು ನಿನಗೆ ಸುಖವನ್ನು ತಂಡತಂಡವಾಗಿ ತಂದುಕೊಡುವಾಗ, ಅದನ್ನು ಉಂಡು ತೀರಿಸಿಬಿಡು, ಹಂಸನೆ!........ ನಾಳೆ ಸುಜ್ಞಾನಸುಖವನ್ನು ಉಣಬಹುದು. ಇಂದು ಕೂಳಿನ ಸುಖವನ್ನು ಸವಿದುನೋಡು" ಎಂದು ಆಲೋಚಿಸಿ ಹೇಳುತ್ತ, ಆ ರಾಯನು ಆತ್ಮದೇವನಿಗೆ ಅನ್ನವನ್ನು ನೀಡಿದನು.

ಕುಸುಮಾಜಿಯಾದರೋ – ತನ್ನ ನೆರಳು ರಾಯನ ತಟ್ಟೆಗೆ ಮುಸುಕದ ಹಾಗೆ ಜೋಕೆಯಿಂದ ನಿಂತು, ಒಮ್ಮೆ ಬಿಸಿಯನ್ನು ಆರಿಸುವಳು; ಒಮ್ಮೆ ಪನ್ನೀರಿನಿಂದ ನೆನೆದ ಬೀಸಣಿಗೆಯನ್ನು ಮೈಗೆ ಬೀಸುವಳು; ಕೈತೊಳೆದು, ಒಮ್ಮೆ ಕಲಸಿ ಕೊಡುವಳು; ಒಮ್ಮೆ ತುಟಿಗೆ ತುತ್ತುಕೊಡುವಳು. ಎಡದ ಕೈಯಿಂದ ಮೈತಡಹುವಳು. ಒಮ್ಮೆ ವಸ್ತ್ರದಿಂದ ಬೆವರು ತೊಡೆಯುವಳು. ಕೂಡಲೆ ಕೈತೊಳೆಯುವಳು, ಕೂಡಲೆ ಪಾತ್ರೆ ಹಿಡಿದು ಬೇಕಾದುದನ್ನು ಬಡಿಸುವಳು.

ಪ್ರಿಯನು ಊಟಮಾಡುತ್ತ, ಮಧ್ಯೆ ನೀರು ಕುಡಿಯೋಣವೇ ಎಂದು ಮನಸ್ಸಿನಲ್ಲಿ ಎಂದುಕೊಳ್ಳುವಷ್ಟರಲ್ಲಿ, ಅವನ ಮನಸ್ಸನ್ನು ಹೊಕ್ಕಿದ್ದಳೆಂಬ ಹಾಗೆ, ಗಿಂಡಿಯನ್ನು ಎತ್ತಿಕೊಡುವಳು.

ಸಿಹಿ ಹೆಚ್ಚಾದರೆ, ಹುಳಿ ಕೊಡುವಳು. ಹುಳಿ ಹೆಚ್ಚಾದರೆ, ಉಪ್ಪು ತೋರುವಳು. ಕಹಿ, ಖಾರ, ಒಗರುಗಳನ್ನು ರುಚಿ ತೋರಿ ಸಂಗ್ರಹಿಸಿಕೊಡುವಳು.

ರಾಜನು ತನ್ನ ಮನಸ್ಸಿನಲ್ಲಿ ಏನೋ ನೆನೆದು, ಅದಕ್ಕೆ ಕೈ ಚಾಚುವ ಮೊದಲೇ ತಾನು ಆ ವಸ್ತುಗಳನ್ನು ಎತ್ತಿಕೊಂಡು ಸಿದ್ಧವಾಗಿರುವಳು.

ಆ ರಾಜನ ಮನಸ್ಸಿನಲ್ಲಿ ಏನೋ ಆ ಕಾಂತೆಯ ಮನಸ್ಸಿನಲ್ಲೂ ಅದೇ. ಅವಳು ಏನು ಇಷ್ಟವಾಗಿ ಬಡಿಸಿದರೆ, ಅದೇ ಅವನಿಗೂ ಇಷ್ಟ. ದೇಹ ಎರಡು, ಆತ್ಮ ಒಂದು ಎಂಬ ಹಾಗೆ ಅವಳು ಬಡಿಸಿದುದನ್ನು ರಾಜ ಸವಿಯುತ್ತಿದ್ದ.

ಅನ್ನ ಸಾಕಾಗಿ ಅದನ್ನು ತಟ್ಟೆಯಲ್ಲಿ ಒತ್ತರಿಸಿದರೆ, ಬೇರೆ ವಿಶೇಷಾನ್ನವನ್ನು ಬಡಿಸುವಳು. ದೃಷ್ಟಿಸನ್ನೆಯಿಂದ ಒಲ್ಲೆನೆಂದರೆ, ಕೈಯ ಮುಗಿದು "ಇನ್ನು ಸ್ವಲ್ಪ ಸೇವಿಸಬೇಕು" ಎನ್ನುವಳು. ಪರಿಪರಿಯಾದ ಅನ್ನಪಾನಗಳನ್ನು ಹೊಸಹೊಸದಾಗಿ ತರತರವಾಗಿ ಅವಳು ನೀಡಿದರೆ, ರಾಜ ಸಾಕೆಂದು ತಲೆ ಕೊಡಹುವನು. ಅವಳು ಕೈಮುಗಿದು, "ಇನ್ನು ಎರಡೇ ತುತ್ತು!" ಎನ್ನುವಳು. "ಮಾಡಿದ ವಸ್ತುವನ್ನು ಎಲ್ಲ ತಪ್ಪದೆ ಸವಿನೋಡಬೇಕು, ಅರಸ!" ಎನ್ನುತ್ತ ಬೇಡಿಕೊಂಡು ಬಡಿಸುವಳು. ರಾಜನು ನಸುನಗುತ್ತ ಅದರ ರುಚಿನೋಡಿಬಿಡುವನು.

ಆನೆಗೆ ಊಟಮಾಡಿಸುವಂತೆ ಆ ಕಾಂತೆ ಬಲವಂತದಿಂದ ತನ್ನ ಪತಿಗೆ ಊಟಮಾಡಿಸಿದಳು. ಆ ರಾಯನು ತೃಪ್ತನಾಗಿ, ಕೈತೊಳೆದು, ಊಟವನ್ನು ಮುಗಿಸಿದನು. ಅನಂತರ ತನ್ನ ದೇಹದಲ್ಲಿ ಆತ್ಮನನ್ನು ಕಂಡು, ಕಣ್ಮುಚ್ಚಿ, ಅಂತ್ಯಮಂಗಲಾರಾಧನೆ ಮಾಡಿ, ಕಣ್ಣು ತೆರೆದನು.

'ಜಿನ ಶರಣು' ಎಂದು ಎದ್ದನು. ಪಕ್ಕದಲ್ಲಿದ್ದ ಹಚ್ಚಡವನ್ನು ಹೆಗಲ ಮೇಲೆ ಹೊದೆದನು. ಅವನ ಮುದ್ದುಮುಖದ ಕಾಂತೆ ಹೂವಿನ ಉಪ್ಪರಿಗೆಗೆ ದಾರಿ ತೋರಿ ನಡಸಿದಳು. ಊಟಮಾಡಿದ ಉಪ್ಪರಿಗೆಯಿಂದ ಮೇಲಕ್ಕೆ ಮೆಟ್ಟಲು ಹತ್ತಿ, ಅರಸನು ಅರಸಿಯ ಕೈಲಾಘವದಿಂದ ಹೂವಿನ ಉಪ್ಪರಿಗೆಗೆ ಹತ್ತಿದನು.

ಆ ಉಪ್ಪರಿಗೆಯ ನಡುವಿನ ಗುಟ್ಟಿನ ಮನೆಯಲ್ಲಿ ಒಪ್ಪವಾಗಿದ್ದ ಶಕುನಿಮಂಚದ ಮೇಲೆ, ಎಡದ ಮಗ್ಗುಲಾಗಿ ಊರಿ ರಾಜನು ಪವ್ವಳಿಸಿದನು. ಕುಸುಮರಾಜಿ ವೀಳೆಯ ಕೊಟ್ಟು, ಪನ್ನೀರು ಚಿಮ್ಮಿಸಿ, ಕಣ್ಣುಗಳಿಗೆ ಕಾಡಿಗೆಯಿಕ್ಕಿ, ಗಾಳಿ ಬೀಸಿ, ಗಂಧ ಲೇಪಿಸಿ, ಪತಿಯನ್ನು ಮನ್ನಿಸಿದಳು. ಪತಿಯ ಪಾದಸೇವೆಗೆ ಕುಳಿತಳು.

"ಹೊತ್ತಾಯಿತು, ಹೋಗು. ಅನ್ನರಸದ ರುಚಿ ನೋಡಿ, ಮತ್ತೆ ಬಾ" ಎಂದು ರಾಜ ಅವಳನ್ನು ಕಳಿಸಿಕೊಟ್ಟ.

"ನನ್ನ ಆತ್ಮ ಬೇರೆ, ನನ್ನ ದೇಹ ಬೇರೆ" ಎಂದು ಕಣ್ಣು ಮುಚ್ಚಿ, ತಾನು ಅಂತರ್ಯವನ್ನು ಗಮನಿಸುತ್ತಿದ್ದ ಹಾಗೆಯೇ, ಅವನಿಗೆ ಅನ್ನಸೊಕ್ಕಿನ ನಸುನಿದ್ರೆ ಕವಿಯಿತು.

ಹಾಸಿಗೆಯ ಮೇಲೆ ಎಡಗೈ, ಅದರಮೇಲೆ ತಲೆ, ಬಲತೊಡೆಯ ಮೇಲೆ ಬಲಗೈ, ಹಜ್ಜೆಗಳು ತುಸು ದೂರ – ಹೀಗೆ ಮಲಗಿ ರಾಜನು ಕಣ್ಣುಮುಚ್ಚಿ ನಿದ್ರೆಯಲ್ಲಿದ್ದನು. ಕೆನ್ನೆಯಲ್ಲಿ, ಕೊರಳ ಮೇಲೆ, ಇಷ್ಟು ಬೆವರು. ತುಟಿ ಉಸಿರಿಗೆ ಸ್ವಲ್ಪ ಅಲುಗುವುದ . ಬೇರೆ ಏನೂ ವಿಕಾರವಿಲ್ಲ. ಹೀಗೆ ಅವನು ಆ ಮೃದುವಾದ ಹಾಸಿಗೆಯಲ್ಲಿದ್ದನು. ವೀಣೆಯ ತಂತಿಯನ್ನು ಮಿಡಿದ ಹಾಗೆ ಎದೆಯಲ್ಲಿ ಉಸಿರಾಟ ಕಾಣಿಸುತ್ತಿತ್ತು. ಇದು ಹೊರತು, ಆ ರಾಜನು ಮಲಗಿಸಿದ ಕುಂದಾಣದ ಪುತ್ಥಳಿಯಂತೆ ಇದ್ದನು.

"ಗಂಡ ಇಷ್ಟು ನಿದ್ದೆಮಾಡಲಿ" ಎಂದು ಆ ಸತಿ ಗಲಭೆಮಾಡದೆ ಹೋದಳು.

ಆ ಚೆಲುವನ ದೇಹದ ಸುವಾಸನೆಗೂ ಆ ಮನೆಯ ಸುಗಂಧಕ್ಕೂ ಸೋತುಬಂದು, ದುಂಬಿಗಳು ಝೇಂಕಾರಮಾಡುತ್ತಿದ್ದುವು. ಮೊರೆಯುವ ಆ ದುಂಬಿಗಳ ಸುಸ್ವರದ ಗಾನ ತಲೆಗೇರಿ ತಾನು ಪರವಶನಾದ ಹಾಗೆ ದೊರೆ ಇತ್ತ ತೆಳುನಿದ್ರೆಯಲ್ಲಿದ್ದನು.

೨

ಇತ್ತ, ಕುಸುಮಾಜಿ, ಗಂಡನು ಉಂಡ ತಟ್ಟೆಯನ್ನು ತೊಳೆಯದೆ, ಅದರಲ್ಲೆ ತಾನು ಅನ್ನಪಾನಗಳನ್ನು ಬಡಿಸಿಕೊಂಡು ಉಂಡು ತೃಪ್ತಿಪಟ್ಟಳು. ಕೈತೊಳೆದುಕೊಂಡಾದ ಮೇಲೆ, ಬಾಗಿಲು ತೆರೆದಳು. ಊಳಿಗದ ಹೆಣ್ಣುಗಳನ್ನು ತೂಗಹೇಳಿ, ಮಂಚದಲ್ಲಿ ಹಾಗೇ ಮೈಚಾಚಿದಳು. ಅನ್ನಸೊಕ್ಕಿನ ನಿದ್ರೆಯನ್ನು ಸ್ವಲ್ಪ ತೀರಿಸಿ, ಬೇಗ ಕಣ್ತೆರೆದು ಎಚ್ಚೆತ್ತಳು.

ಉಪ್ಪರಿಗೆಯಲ್ಲಿ ಪತಿಯನ್ನು ಮಲಗಿಸಿದ ಸಜ್ಜನೆಗೆ ಇಲ್ಲಿ ಹೇಗೆ ತಾನೆ ನಿದ್ರೆ ಬಂದೀತು! ತಪ್ಪುಮಾಡಿದ ಹಾಗೆ ಎದೆಯಲ್ಲಿ ದಿಗಿಲುಗೊಂಡು, ಆ ಜಾಣೆ ಬೇಗ ಎದ್ದಳು.

ಅಷ್ಟುಹೊತ್ತಿಗೆ ಇಬ್ಬರು ನರ್ತಕಿಯರು ಅಲ್ಲಿಗೆ ಬಂದರು.

"ಅರಸನಿಗೆ ಹೇಳಿ: ಈ ರಾತ್ರೆ ಬಂದು ನಮ್ಮ ನರ್ತನವನ್ನು ನೋಡಿ ಅನುಗ್ರಹಿಸಲಿ" ಎಂದು ವಿಜ್ಞಾಪಿಸಿದರು.

“ ಆಗಲಿ. ಸ್ವಾಮಿಗೆ ಹೇಳುತ್ತೇನೆ. ನೀವು ಸಿದ್ಧವಾಗಿರಿ ” ಎಂದು ಕುಸುಮಾಜಿ ಅವರನ್ನು ಕಳುಹಿಸಿಕೊಟ್ಟು, ಊಳಿಗದ ಹೆಣ್ಣುಗಳನ್ನೂ ಹೊರಗೆ ನೂಕಿ, ಬಾಗಿಲನ್ನು ಇಕ್ಕಿಕೊಂಡಳು.

ತನ್ನ ಹೊಳೆಹೊಳೆಯುವ ಮುಖವನ್ನು ಕನ್ನಡಿಯಲ್ಲಿ ನೋಡಿ ಕೊಂಡಳು. ತಿಲಕವನ್ನು ಚೆನ್ನಾಗಿ ತಿದ್ದಿದಳು. ಕೆದರಿದ್ದ ಮುಂಗುರುಳು ಗಳನ್ನು ಸವರಿಸಿಕೊಂಡಳು. ತನ್ನಲ್ಲಿ ತಾನೆ ಉಬ್ಬಿ ನಕ್ಕಳು.

ಸಿರಿಯ ಮಡಿಕೆಗಳನ್ನು ಆಚೆ ಈಚೆ ಮಾಡಿದಳು. ಹಾರದ ಕುಚ್ಚು ಗಳನ್ನು ಮೆರಗು ಕಾಣಿಸುವಂತೆ ಇಳಿಬಿಟ್ಟಳು. ತುಂಬಿದ ಆಭರಣಗಳ ಓರೆ ಕೋರೆಯನ್ನು ತಿದ್ದಿ, ಹದವಾದಳು.

ಕಸ್ತೂರಿ ಪುಣುಗು ಜವಾದಿ ಮುಂತಾದ ಸುವಸ್ತುಗಳನ್ನು ಲೇಪಿಸಿ ಕೊಂಡು, ತುಂಬ ಹೂ ಮುಡಿದು, ಬಂದು ಮುತ್ತಿದ ಸಮಸ್ತಭೃಂಗಗಳಿಂದ ತಾನು ವಿಸ್ತಾರವಾಗಿ ಹಾಡಿಸಿಕೊಂಡಳು.

ಕೆಂಪುಬಾಯಿಯ ವೀಳೆಯ, ಎಡದ ಕೈಯಲ್ಲಿ ಹಿಡಿದ ಬಿಳಿಯೆಲೆ — ಆ ತುಂಬುಯುವತಿ ನಲ್ಲನ ಎಡೆಗೆ ತುಳುಕುವ ಅರ್ತಿಯಿಂದ ಬಳುಕುತ್ತ ನಡೆದಳು.

ಕಾಲಂದುಗೆಗಳ ದನಿ, ಕಟಿಸೂತ್ರದ ಕಿಂಕಿಣಿ, ಇವುಗಳನ್ನು ಝಂಝಣ ಝಲಿರೆನಿಸುತ್ತ, ಹಂಸಗಳ ನಡೆಯನ್ನೂ ಹಿಮ್ಮೆಟ್ಟಿಸಿ ಆಕೆ ಉಪ್ಪರಿಗೆಗೆ ಹತ್ತಿದಳು.

ಮೆಟ್ಟಿಲು ಹತ್ತಿ ಬರುತ್ತ, ಗುಟ್ಟಿನ ಮನೆ ಹತ್ತಿರ ಬಂತು ಎಂಬಲ್ಲಿ ತನ್ನ ಚಲಿಸುವ ಆಭರಣಗಳ ದನಿಯನ್ನು ಮರೆಮಾಡಿ, ಆ ಹೆಣ್ಣು ಜೋಕೆ ಯಿಂದ ಮೆಲ್ಲಗೆ ಬಂದಳು. ‘ ದೊರೆಗೆ ಈಗ ನಿದ್ದೆಯೊ? ಎಚ್ಚರವೊ? ’ ಎಂದು ಜಪಿಸುತ್ತ, ಇಣಿಕಿ ನೋಡುತ್ತ, ಹೆಜ್ಜೆ ಶಬ್ದಮಾಡದೆ ಕುಸುಮಾಜಿ ಒಳಗೆ ಬಂದಳು.

೩

ಇತ್ತ, ಈ ಕಾಂತೆ ಹಾಗೆಂದುಕೊಂಡು ಬರುತ್ತಿರಬೇಕಾದರೆ, ಅತ್ತ ಆ ರಾಯನು ಒಂದಿಷ್ಟು ಹೊತ್ತಿನ ಮೇಲೆ ತಾನು ಎಚ್ಚತ್ತು ಶುದ್ಧಾತ್ಮವೃತ್ತಿಯಲ್ಲಿ

ಇದ್ದನು. ಓಡಿಹೋಗುವ ಮಳೆಯ ಮೋಡ ಎಷ್ಟುಹೊತ್ತು ಸೂರ್ಯನನ್ನು ಮುಚ್ಚಿರುವುದೋ ಅಷ್ಟೇ ಹೊತ್ತು ರಾಜನಿಗೆ ಸುಖನಿದ್ರೆ. ಅದು ಮುಗಿದ ಒಂದು ಅರೆಗಳಿಗೆಯ ಮೇಲೆ ರಾಜನು ತನ್ನ ಹಾಸಿಗೆಯ ಮೇಲೆಯೇ ಆತ್ಮ ಯೋಗದಲ್ಲಿರುವನು.

ನಿದ್ರೆಮಾಡುವವನ ಹಾಗೆ ಮಲಗಿಕೊಂಡು, ಆಗ ಚಿದ್ರೂಪಿನಲ್ಲಿ ಮನಸ್ಸನ್ನು ನಿಲ್ಲಿಸಿ, ಕಣ್ಣುಮುಚ್ಚಿ, ಸುಜ್ಞಾನ ಸಮುದ್ರದಲ್ಲಿದ್ದನು.

"ಕಾಣುವವನು ತಾನೆ, ಕಾಣಿಸಿಕೊಳ್ಳುವ ವಸ್ತುವೂ ತಾನೆ, ಉಣ್ಣು ವವನೂ ತಾನೆ, ಉಣಲು ಬರುವ ಆ ಆತ್ಮಸುಖವೂ ತಾನೆ" ಎಂದು ಆ ರಾಯನು ಇರುವ ಸಂದರ್ಭದಲ್ಲಿ ಕುಸುಮಾಜಿ ಅಲ್ಲಿಗೆ ಬಂದಳು.

ಅವಳು ಬರುವುದನ್ನು ಅರಿತು, ಭರತನು, ಚಿದಂಬರ ಪುರುಷನಿಗೆ ನಮಿಸಿ, ಯೋಗವನ್ನು ಅಡಗಿಸಿ, ಹೊದೆದ ದಿವ್ಯಾಂಬರವನ್ನು ತಳ್ಳಿ ಮೈಮುರಿದನು. ಆಕಳಿಸುತ್ತ, ಕಣ್ಣನ್ನು ತೀಡಿಕೊಳ್ಳುತ್ತ, 'ವೀತರಾಗಾಯ ನಮಃ' ಎಂದು, ಚಂದ್ರನ ಮೇಲೆ ಮುಚ್ಚಿದ ಬಿಳಿಯ ಮೋಡವನ್ನು ಒತ್ತ ರಿಸುವ ಹಾಗೆ, ತನ್ನ ಮುಸುಕನ್ನು ಆಚೆ ತಳ್ಳಿದನು.

ಬಾಗಿಲ ಮರೆಗೆ ನಿಂತ ಸತಿಯನ್ನು ಕಂಡನು. "ಬಾ, ಪ್ರಚಂಡೆ!" ಎನ್ನುತ್ತ ಎದ್ದು ಕುಳಿತನು.

ಕೆಂಡವನ್ನು ಉಗುಳುವ ಕೆಂಪಿನ ತುಟಿಯಲ್ಲಿ ಸಸುನಗೆಯನ್ನು ಉರುಳಿಸುತ್ತ ಕುಸುಮಾಜಿ ಬಂದಳು. ಹತ್ತಿರ ಬಂದು, ಬಾಯಿ ಮುಕ್ಕು ಳಿಸುವುದಕ್ಕೆ ಪನ್ನೀರು ಕೊಟ್ಟಳು. ತನ್ನ ಕೂರುಗುರಿನಿಂದ ಸೀಳಿದ ಎಲೆ ಯನ್ನು ಮಡಿಸಿಕೊಟ್ಟಳು.

ದೊರೆ ನಗುತ್ತಾ ನಗುತ್ತ ಮಾತನಾಡುತ್ತ ಎಲೆಯ ಮಡಿಕೆಗಳನ್ನು ಬಾಯಿಗೆ ಹಾಕಿಕೊಳ್ಳುತ್ತ ಮುಖವೆತ್ತಿ ತನ್ನೊಡನೆ ಮಾತನಾಡಲು ಇಷ್ಟ ಪಡುವ ಸತಿಯನ್ನು ಕಂಡನು.

"ಇವಳೊಡನೆ ಎರಡು ಆಟದ ಮಾತು ಕೇಳೋಣ" ಎಂದುಕೊಂಡು, ಹಾಗೇ ಮಲಗಿ, ಮುಸುಕೆಳೆದು, ಕೈನೀಡಿ ಬಿಳಿಯೆಲೆಯ ಕವಳವನ್ನು ಅವಳಿಗೆ ಕೊಡುತ್ತ, ಅವಳನ್ನು ಕೇಳಿದ :

"ಕುಸುಮಿ ತಾನೇಕೆ ಬಂದಳೊ, ಈಗ ?"

ಕುಸುಮಾಜಿ ನಸುನಗುತ್ತ "ಕುಸುಮಾಜಿ ಏಕೆ ಬಂದಳೊ ನಿಮಗೆ

"ಮುಖ ನೋಡಿದರೆ, ನಮ್ಮೊಡನೆ ಈಗ ಜಗಳಕ್ಕೆ ಬಂದಹಾಗಿದೆ."

"ಜಗಳವಲ್ಲ, ಸ್ವಾಮಿ. ಒಂದು ಗಾಢವಾದ ಗೂಢಾರ್ಥವುಂಟು, ಒಡೆಯರ ಕೂಡ ಯೋಚಿಸೋಣ ಎಂದು ಬಂದಿದ್ದೇನೆ."

"ಯಾವ ಗೂಢಾರ್ಥ? ಏನು ಹೇಳಬೇಕು? ಕೇಳು."

"ಕೇಳಿದೆನಲ್ಲವೆ, ಸ್ವಾಮಿ. ಮೂಢರಿಗಾದರೆ ಹೇಳಬೇಕು. ಪ್ರೌಢರು ಬಂದಾಗ ತಿಳಿಯಲಾರರೆ!"

ಅಷ್ಟುಹೊತ್ತಿಗೆ ಎಲೆಯ ಕವಳ ಸವಿದು ಸಾಕಾಯಿತು. ಕುಸುಮಾಜಿ ತನ್ನ ಪತಿಯ ಪಾದಗಳನ್ನು ಕೈಯಿಂದ ಒತ್ತಿದಳು. ಚಿಗುರು ತಾವರೆಯ ಮೇಲೆ ಓಡಿಯಾಡುತ್ತಿತ್ತು.

"ಕಾಲು ಒತ್ತುವ ಕೌಶಲ ಚೆನ್ನಾಗಿದೆ, ಕುಸುಮಿ" ಎಂದು ಭರತನು ಅವಳನ್ನು ಪಾದಗಳಿಂದ ಅಪ್ಪಿದನು.

"ಆಗಬಹುದು, ದೇವ. 'ಒಡೆಯ ಮೆಚ್ಚಿ ಕಾಲಲ್ಲಿ ಒದೆದ' ಎಂಬ ಗಾದೆ ನನ್ನಲ್ಲಿ ಫಲಿಸಿತು" ಎಂದಳು ಕುಸುಮಾಜಿ.

ದೊರೆಯು ನಗುತ್ತ ಎದ್ದನು. ಅಲ್ಲಿಂದ ಮುಂದೆ ಅವರ ಉದ್ಯೋಗದ ಸೊಗಸನ್ನು 'ಹಾಗೆ, ಹೀಗೆ' ಎಂದು ಹೇಳಿದೆನಾದರೆ, ಬಲು ಹಗರಣ ವಾದೀತು. ಅದು ಹಾಗಿರಲಿ.

೪

ತರುವಾಯ, ಕುಸುಮಾಜಿ ವೀಣೆಯನ್ನು ಕೈಗೆತ್ತಿಕೊಂಡಳು.

ಅವಳು ಹಾಡಿದ ಗಾನವನ್ನು ಏನು ವರ್ಣಿಸಲಿ! ವೀಣೆಗೆ ತಾನು ಒಬ್ಬ ಸಖಿಯೋ ಎಂಬಂತೆ ಶಾರೀರಸಮಾನವಾಗಿ ಹಾಡಿದಳು.

ಎಡಗೈಯಲ್ಲಿ ವೀಣೆಯನ್ನು ಎತ್ತಿ ಹಿಡಿದು, ಮೇಲುಗಡೆಯ ಮೆಟ್ಟಲು ಗಳಲ್ಲಿ ಬೆರಳಾಡಿಸಿ, ಕೆಳಗಡೆ ತಂತಿಯಲ್ಲಿ ಬಲಗೈಯ ಬೆರಳನ್ನು ಮಿಡಿದು ಹಾಡಿದಳು.

ಅವಳು ತನ್ನ ಕೆಂಪು ಬಾಯನ್ನು ಸ್ವಲ್ಪ ತೆರೆದು ಆ ಎಂದು ರಾಗವನ್ನು

ಬಲದಲ್ಲೂ ಮುತ್ತಿ ಶ್ರುತಿಕೂಡುತ್ತ ಭ್ರಮಿಸಿದುವು.

ರಾಗವನ್ನು ಒಮ್ಮೆ ವೀಣೆಯಲ್ಲಿ ತೋರುವಳು, ಒಮ್ಮೆ ಕೊರಳಿನಲ್ಲಿ ತೋರುವಳು. ಒಮ್ಮೆ ಒಟ್ಟಿಗೆ ಹೇಳುವಳು. ಒಮ್ಮೆ ಬಿಟ್ಟು ಬಾರಿಸುವಳು. ವೀಣೆಯ ಸಂಗಡ ಅವಳು ಹಾಡುತ್ತಿದ್ದರೆ, ಎರಡು ವೀಣೆಗಳು ಒಂದಾಗಿ ಹಾಡಿದ ಹಾಗಿರುತ್ತಿತ್ತು.

ವೇಳೆ ಅರಿತು, ಶ್ರುತಿ ಅರಿತು, ಕಟ್ಟಣೆ ಅರಿತು, ಆಲಾಪದ ಅನುಭವ ವನ್ನು ಅರಿತು, ಕುಸುಮಾಜಿ ವೀಣೆಯನ್ನು ನುಡಿಸಿ ಹಾಡಿದಳು.

ಮೊದಲು ಶ್ರೀರಾಗರಸವನ್ನು ಆಲಾಪಿಸಿ, ತರುವಾಯ ಮಾಳವ ಶ್ರೀರಾಗರಸವನ್ನು ಎತ್ತಿದಳು—'ಈ ರೀತಿಯಾದರೆ, ಶ್ರೀರಾಗವಲ್ಲದ ಮಿಕ್ಕೆಲ್ಲ ದಾರಿದ್ರ್ಯ ರಾಗಗಳು' ಎನ್ನಿಸುವ ಹಾಗೆ.

ಆಲಾಪಮಾಡುತ್ತಾ ಅರಸನ ಮುಖ ನೋಡುವಳು. ಆ ಹೊತ್ತಿಗೆ ತನಗೆ ನಗು ಉಂಟಾಗುವುದು. ಕೂಡಲೆ, ಹೊರ ತೋರಿಕೆಗೆ ಕಣ್ಣುಮುಚ್ಚಿ, ಒಳಗೇ ನಗುತ್ತ ಹಾಡುವಳು. ಕಡೆಗಣ್ಣಿನಿಂದ ರಾಯನನ್ನು ಕದ್ದುನೋಡಿ ಹಾಡುವಳು. ನಗೆಕೂಡಿ ಹಾಡುವಳು. ತಂತಿಯನ್ನು ತೀಡುತ್ತ, ಆಕಡೆ ದೃಷ್ಟಿಯಿಟ್ಟು ಹಾಡುವಳು.

ಒಳಗೆ ಉಕ್ಕಿದ ಆನಂದರಸ ತನ್ನ ದೇಹವನ್ನು ತುಂಬಿ ತುಳುಕಿ ಹೊರಗೆ ಚೆಲ್ಲುವ ಹಾಗೆ, ಆ ತೆಳುವಾದ ಬಸಿರಿನಿಂದ ಹೊರಟ ಸುಸ್ವರ ತುಟಿ ಗಳಿಂದ ಹೊಳೆದು ಮೋಹವುಂಟುಮಾಡುತ್ತಿತ್ತು. ಸುಳಿಯಂತಿದ್ದ ನಾಭಿ ಯಲ್ಲಿ ಹುಟ್ಟಿ, ಮೃದುವಾದ ಎದೆಯಲ್ಲಿ ಬೆಳೆದು, ನುಣುಪಾದ ಕೊರಳಲ್ಲಿ ಪ್ರಾಯಪಡೆದು, ಆ ಎಳೆಯುವಳ ಬ್ರಹ್ಮರಂಧ್ರವನ್ನು ಏರಿ, ಆ ಆಲಾಪ ಆಕೆಯ ತುಟಿಗೆ ಇಳಿದುಬಂದು ಮೋಹವನ್ನುಂಟುಮಾಡಿತು.

ಅದೆಲ್ಲಿ ಕಲಿತಳೊ! ಅದೆಲ್ಲಿ ಕಂಡಳೊ! ಪುಂಖಾನುಪುಂಖವಾಗಿ ಮೇಲಿಂದ ಮೇಲೆ ಹೊಸಹೊಸತಾಗಿ ತಾನಗಳನ್ನು ತಂದಳು — ಜೇನಿನ ಸೋನೆಯನ್ನು ಕರೆದುತಂದ ಹಾಗೆ! ಪ್ರಿಯನಿಗೆ ಪತ್ರ ಬರೆಯಲು ಎತ್ತಿ ಕೊಂಡ ಕಂಟದ ಮಧುರ ಧ್ವನಿಯೋ ಎಂಬಂತೆ ಅವಳ ಕಲಕಂಠದಿಂದ

ಹೊಸಹೊಸ ತಾನ ಉಸ್ಮೃತು. ಸೋಕಿ ಚೆಂದುಟೆಯನ್ನು ಕಚ್ಚುವ ಇನಿಯುನಿಗೆ, ಮುಗ್ಧೆಯಾದವಳು "ಈ ತೊಡಕು ಸಾಕು" ಎಂದು ಕೈ ಅಡ್ಡತಂದು ಒದರುವಾಗ ಆದ ಕಂಕಣಗಳ ಕಿಂಕಿಣಿಯೋ ಎಂಬಂತೆ ಕೊರಳು ಕುಣಿಸಿ ದನಿ ತೋರಿದಳು.

ಉಚ್ಚದಿಂದ ಎತ್ತುವಳು! ಅಡಕದಿಂದ ಅಡಗಿಸುವಳು! ಮಿಂಚಿನಂತೆ ಕೂಡಲೆ ಎತ್ತರಿಸುವಳು! ಹಂಸವನ್ನು ನಡೆದಾಡಿಸುವಂತೆ ರಾಗದ ಸಂಚು ಕಾಣಿಸಿ ಹಾಡಿದಳು. ಬಂದ ತಾನವನ್ನು ಮತ್ತೆ ಬರಗೊಡದೆ, ಹೊಸಹೊಸ ತಾನಗಳನ್ನು ತಂದು ತಂದು ರಾಜನಿಗೆ ಹಬ್ಬಮಾಡಿದಳು.

ರಾಜ ಅದನ್ನು ಕೇಳಿ ಹಿಗ್ಗುತ್ತಿದ್ದ. ಗಂಡನ ಆನಂದಕ್ಕೆ ಅವಳು ಉಬ್ಬುತ್ತಿದ್ದಳು. ಕುಸುಮರಾಜಿ ಲಾವಣ್ಯವತಿ. ಅವಳ ಶರೀರ ತರುಣಿಯ ಶಾರೀರ. ಪರರು ಯಾರೂ ಇಲ್ಲದ ಏಕಾಂತ. ಪತಿಗೆ ಪ್ರೀತಿಯಾಗಲೆಂದು ಒಲಿದು ಹಾಡುತ್ತಿದ್ದಾಳೆ. ಅದನ್ನು ಕೇಳುತ್ತ, ರಾಯನಿಗೆ ಜುಂಮು ಜುಂಮನೆ ಮೈ ರೋಮಾಂಚಗೊಳ್ಳುತ್ತಿದೆ. ಅಧಿಕವಾದ ಸುಮ್ಮಾನದಿಂದ ಕೇಳುತ್ತಿದ್ದಾನೆ.

ತರುವಾಯ, "ಸಮುದ್ರ ನಾಸಿನೆಯಲ್ಲಿ ಅಡಗಿತು! ನೆಲದಲ್ಲಿ ಆಕಾಶ ಹಾಳಿಹೋಯಿತು!" ಎಂದು ಆ ರಾಣಿ ಪರಮಾತ್ಮನ ಕಲೆಯನ್ನು ಅವಲಂಬಿಸಿ, ಹಿತವಾಗಿ ಹಾಡಿದಳು.

"ಒಳಗಿರುವ ತನ್ನ ಆತ್ಮವನ್ನು ಕಾಣುವುದು ಆಶ್ಚರ್ಯ. ಹೊರಗಿನ ಹೆಂಡಿರ ಹೃದಯದ ಸಂಚನ್ನು ತಿಳಿಯುವುದು ಆಶ್ಚರ್ಯ. ಈ ಎರಡಲ್ಲದೆ ಮಿಕ್ಕ ವಿದ್ಯೆಗಳು ಏನು ಮಹಾ!" ಎಂದು ಹಾಡಿದಳು.

"ಕುದುರೆಯ ಹಾಗೆ ನೆಗೆದು ಓಡುವ ಚಿತ್ತವನ್ನು ನಿಲ್ಲಿಸುವುದು ಕಷ್ಟ. ಎದೆಯಲ್ಲಿ ಆತ್ಮನನ್ನು ಕಾಣುವುದು ಕಷ್ಟ. ಪ್ರಮದೆಯರನ್ನು ಒಲಿಸುವುದು ಕಷ್ಟ. ಉಳಿದ ಯಾವುದೂ ಇಷ್ಟು ಕಷ್ಟವಲ್ಲ" ಎಂದು ಹಾಡಿದಳು.

"ಯೋಗಶಾಸ್ತ್ರದಲ್ಲಿ ಆತ್ಮತತ್ತ್ವವೆ ಕಡೆ. ಹತ್ತು ವಿಧದ ಭೋಗ ಗಳಲ್ಲಿ ಸ್ತ್ರೀಯೇ ಕಡೆ" ಎಂದು ಯೋಗಶಾಸ್ತ್ರ ಭೋಗಶಾಸ್ತ್ರ ಎರಡನ್ನೂ ತೂಗಿ ತೋರ್ಪಡಿಸಿ ಹಾಡಿದಳು.

ಅನುರಾಗದ ಸತಿಯೊಡನೆ ಅನುರಾಗದ ಪತಿ ಇರುವಾಗ ಏನೇನು ಸುಖಪಡಬಹುದು ಎಂಬುದನ್ನು ವಿವರ ವಿವರವಾಗಿ, ಹೂಮಾಲೆಯಿಂದ ಹೊಡೆದ ಹಾಗೆ, ಅತಿ ಕೋಮಲವಾಗಿ ಹಾಡಿದಳು.

“ಚೆನ್ನಾಯಿತು, ಕುಸುಮ! ಬಲು ಸೊಗಸಾಯಿತು, ಕುಸುಮರಾಜಿ! ಬಿಡಿಸಿ ಬಿಡಿಸಿ ಹಾಡಿದೆ, ಕುಸುಮಾ! ಎಲ್ಲಿ, ಇನ್ನೊಮ್ಮೆ!” ಎಂದು ರಾಜ ಲೇಸುಲೇಸೆಂದ.

ಆ ಮಾತು ಕೇಳಿ ಅವಳು ಉಬ್ಬಿ ಹಾಡುವಳು. ಅದನ್ನು ಕೇಳಿ, ಆ ರಾಜನೂ ಉತ್ಸಾಹಗೊಳ್ಳುವನು. ತಾನು ಅವಳಿಗೆ ಮೆಚ್ಚುತ್ತ, ಅವಳು ತನಗೆ ಮೆಚ್ಚುತ್ತ, ಅವರು ಇಬ್ಬರೂ ಆನಂದಗೋಷ್ಠಿಯಲ್ಲಿದ್ದರು.

ಮೆಚ್ಚಿಕೆಗೆ ಬಂದ ಪ್ರಿಯೆ ಒಂದು ಹುಚ್ಚುಮಾತನಾಡಿದರೆ ಸಾಕು, ಪ್ರಿಯನಿಗೆ ಎದೆ ನೊಚ್ಚಗಾಗುತ್ತದೆ – ಎಂದಮೇಲೆ, ಅರುಮೆಯ ಅರಸಿ ಅಚ್ಚಗಾನವನ್ನು ಆಲಾಪಿಸಿದರೆ, ಚಕ್ರವರ್ತಿ ಮೆಚ್ಚದಿರುವನೆ? ಮೆಚ್ಚಿ, ಗಲ್ಲ ಹಿಡಿದಲುಗುವನು, ತಲೆಯನ್ನು ತಡಹುವನು, ‘ಚೆನ್ನಾಯ್ತು, ಚೆನ್ನಾಯ್ತು’ ಎನ್ನುವನು. ಸೊಲ್ಲುಸೊಲ್ಲಿಗೂ ಅವಳು ಪುಟವೇರಿ, ಹೊಸಹೊಸದಾಗಿ ಹಾಡುವಳು.

ಒಮ್ಮೆ, ಅವಳು ಹಾಡಿದ ಮೋಹದೊಂದು ಗಾನರಸಕ್ಕೆ ಅರಸನು ಪರವಶನಾಗಿ, ಅವಳ ಕೈಯ ವೀಣೆಯನ್ನು ಅದುಗಿಗೆ ಒತ್ತಿ, ಅವಳನ್ನು ಆಲಿಂಗಿಸಿ ಬಿಟ್ಟು, ಹಾಗೇ ಹಾಡೆಂದ. ಅವಳೂ ಉತ್ಸಾಹದಿಂದ, ಸಂಭ್ರಮದಿಂದ, ಹೊಸ ಪೊಗರಿನಿಂದ ಹಾಡಿದಳು. ಅರಸನು ಅದರ ಸೊಗಸು ಎದೆತಟ್ಟಿ, ಕಣ್ಣುಮುಚ್ಚಿ ನಗುತ್ತ, “ನಿರಂಜನಸಿದ್ಧಾಯ ನಮಃ” ಎಂದು ಆನಂದದಲ್ಲಿ ಇದ್ದನು.

ಅರಸನು ಒಂದು ಕೀಲನ್ನು ಒತ್ತಿದ. ತಾಂಬೂಲದ ತಟ್ಟೆಯನ್ನು ಹಿಡಿದ ಹೆಣ್ಣುಬೊಂಬೆಗಳು ಮಂಚದ ಹತ್ತಿರ ಬಂದು, ವೀಳೆಯವನ್ನು ಕೊಟ್ಟು, ಬೀಸಣಿಗೆಯನ್ನು ಇಕ್ಕತೊಡಗಿದುವು.

ಕುಸುಮರಾಜಿ ಹಾಡುವಾಗ, ಅವಳಿಗೆ ಎಲೆಯ ಗಳಿಗೆಯನ್ನು ಕೊಡಲು ಪುತ್ಥಳಿ ತಡಮಾಡಿತು. ಅರಸ ಅದನ್ನು ನೋಡಿದ. ತನ್ನ ಕೈಯಲ್ಲಿದ್ದ ಗಳಿಗೆಯನ್ನೆ ತನ್ನ ಹೆಣ್ಣಿನ ಬಾಯಿಗೆ ನೀಡಿದ. “ಒಲ್ಲೆ” ಎಂದು ಅವಳು

ಆ ಎಲೆಯ ಗಳಿಗೆಯನ್ನು ತಲೆಯಲ್ಲಾಡಿಸಿ ನಿರಾಕರಿಸಿ, ನಗುತ್ತಾ ಹಾಡಿದಳು. "ಓಹೊ! ನನ್ನ ಕೈಯಲ್ಲಿ ತಾನು ಸೇವೆ ಕೊಳ್ಳುವುದಿಲ್ಲವೆ!" ಎನ್ನಿಸಿತು, ಅರಸನಿಗೆ.

"ಚಿಂತೆಯಿಲ್ಲ, ಹಿಡಿ, ಕುಸುಮಿ! ಪ್ರಿಯೆಗೆ ಪ್ರಿಯನು ಒಲಿದು ಕೊಟ್ಟರೆ ಕೊಳ್ಳಬಹುದು. ಇದು ನನಗೆ ಸಂತೋಷ" ಎಂದು ಅರಸನು ಗಳಿಗೆಯನ್ನು ಅವಳ ತುಟಿಯ ಹತ್ತಿರ ತಂದನು.

ಅವಳಂತೂ ಒಲ್ಲಳು. ಹಾಡುವುದನ್ನು ಬಿಟ್ಟು, ಬಾಯ್ಮುಚ್ಚಿ, ವೀಣೆಯಲ್ಲಿ ಮಾತ್ರ ಕೇಳಿಸಿದಳು. ಭರತ ಬಿಟ್ಟನೆ! ಬಾಯಿಗೆ ಬಾಯಿಟ್ಟು, ಕುಟುಕುದಂಬುಲ ಕೊಟ್ಟುಬಿಟ್ಟ. ಆ ಕರ್ಪೂರತಂಬುಲದ ಬಲದಿಂದ ಕುಸುಮಾಜಿಗೆ ಜುಮ್ಮನೆ ರೋಮಾಂಚವಾಗಿ, ತನ್ನ ಮೊದಲಿನ ಸವಿಗೆ ಇಮ್ಮಡಿ ಮುಮ್ಮಡಿ ಆಗುವಂತೆ ಸುಮ್ಮಾನದಿಂದ ಹಾಡಿದಳು.

ಹಿಂದೆ, ನಲ್ಲನ ಕಾಲು ಸೋಕಿದರೆ ಅದೇ ಸವಿಯೆನ್ನುತ್ತಿದ್ದವಳು ಈಗ ಅವನೆ ಮೆಚ್ಚಿ ಮೋಹಿಸಿ ಮನ್ನಿಸುತ್ತಿದ್ದರೆ–ಅವಳ ಹರ್ಷವನ್ನು ಎಷ್ಟೆಂದು ಹೇಳೋಣ! ಸ್ವರ್ಗದ ಸುಖ ತನ್ನ ಸುತ್ತ ಸುಳಿದ ಹಾಗೆ, ಮುಕ್ತಿಯೇ ತನಗೆ ಸಮೀಪವಾದ ಹಾಗೆ, ನಿಸ್ಸಂಕೋಚವಾಗಿ ತನ್ನ ನಲ್ಲನ ಸಂಗದಲ್ಲಿ ಉಬ್ಬಿ ಹಾಡಿದಳು.

ಪುತ್ಥಳಿಯು ಉಗುಳುವ ಪಾತ್ರವನ್ನು ಹಿಡಿದು ಕೈಗೆ ನೀರೆರೆಯಿತು. ಮೊದಲ ತಂಬುಲವನ್ನು ಮುಕ್ಕಳಿಸಿ ಉಗುಳಿ, ಹೊಸ ವೀಳೆಯವನ್ನು ಕೊಂಡು, ಆ ದಂಪತಿಗಳು ಮತ್ತೆ ಗಾನಕೇಳಿಯಲ್ಲಿ ಓಲಾಡಿದರು.

ಕುಸುಮಾಜಿ, ಒಮ್ಮೆ ಭೋಗದ ಸಿರಿಯನ್ನು ಹಾಡುವಳು, ಒಮ್ಮೆ ಯೋಗದ ಸಿರಿಯನ್ನು ಹಾಡುವಳು. ರಾಜನಾದರೋ "ಶ್ರೀ ಗುರು ಹಂಸನಾಥಾಯ ನಮಃ" ಎಂದು ಕಣ್ಮುಚ್ಚಿ ಎರಡನ್ನೂ ಕೇಳಿ ಸಂತೋಷ ಪಡುವನು.

"ಬೆಳುದಿಂಗಳ ಬೊಂಬೆಯೆ! ಕೈಗೆ ಸಿಕ್ಕಿದ ಹೊಸ ರತ್ನದ ಕನ್ನಡಿಯೆ! ಚಿನ್ಮಯನೆ! ಚೆನ್ನಿಗನಾದ ಭರತರಾಜನಿಗೆ ಕಾಣಿಸಿಕೊಂಡೆ ಯಲ್ಲವೆ!" ಎಂದು ಅವನ ಆತ್ಮಕಲೆಯನ್ನು ಕುರಿತು ಹಾಡಿದಳು.

"ಚೆನ್ನಾಯ್ತು, ಕುಸುಮಾಜಿ! ಸೊಬಗಾಯ್ತು, ಕುಸುಮಾಂಗಿ! ಹಸನಾಯ್ತು, ಕುಸುಮಕೋಮಲೆ! ಲೇಸುಲೇಸು, ಕುಸುಮಗಂಧಿನಿ!" ಎಂದು ರಾಜ ಅವಳನ್ನು ಮುದ್ದಿಸಿ ಹೇಳಿದ.

"ಸರಸಸಂಗೀತವೆ! ತಡಮಾಡಬೇಡ. ನಮ್ಮ ಭರತರಾಜೇಂದ್ರನ ಮುಖದ ಮುರಿಮೀಸೆಯಂತೆ ಮೋಹಿಸುತ್ತ ಬಾ. ಬಾ!" ಎಂದು ಕರೆಯುತ್ತ ನಗುತ್ತ ಹಾಡಿದಳು.

ಹಾಡುತ್ತ ಹಾಡುತ್ತ ಒಮ್ಮೆ "ದೇವ, ಬಾಯಿ ತೆರೆ. ಬಾಯಿಮುಟ್ಟಿ ನಾನೇ ತಂಬುಲವನ್ನು ಆಯ್ದುಕೊಳ್ಳುತ್ತೇನೆ" ಎಂದು ಕುಸುಮಾಜಿ ಅರಸನ ಬಾಯಿಂದ ರಸತಾಂಬೂಲವನ್ನು ಕೊಳ್ಳುತ್ತ, ಅವನ ಚೆಂದುಟಿಯನ್ನು ಕಚ್ಚಿ ಹೀರಿದಳು. ದೊರೆಯು "ಎಲ ಎಲಾ! ಸನ್ಮಾನಕ್ಕೆಂದು ಕರೆದರೆ ಮನೆಯೊಳಗಿನ ಸೊಮ್ಮನ್ನು ಕದ್ದುಕೊಂಡು ಹೋದಹಾಗೆ, ತಾಂಬೂಲವನ್ನು ಕೋರಿ ಮತ್ತೊಂದನ್ನು ಎತ್ತಿಕೊಂಡೆಯಲ್ಲಾ!" ಎಂದರೆ; ಕುಸುಮಾಜಿ ಹೇಳಿದಳು: "ಇಲ್ಲ, ನೀನು ಹಾಕಿಕೊಂಡ ಅಡಕೆಯ ಚೂರು ತುಂಬ ಕಠಿಣವಾಗಿತ್ತು. ಆದ್ದರಿಂದ ಮೃದುವಾದುದನ್ನು ಆರಿಸಿಕೊಂಡೆ."

ಇನ್ನೊಮ್ಮೆ, ನರುದಂಬುಲದ ರಸ ಚಿಮ್ಮಿ ಎದೆಯ ಮೇಲೆ ಬಿತ್ತು. ಕುಸುಮಾಜಿ ಅದನ್ನು ಅರಿಯದೆ ಹಾಡುತ್ತಿದ್ದಾಳೆ. ಅರಸನು ಅದನ್ನು ಕೈಯಾರೆ ತೊಡೆದು, ಸೀರೆಸಿಂದ ಕೈತೊಳೆದುಕೊಂಡ. ಕುಸುಮಾಜಿ ಬೆದರಿದಂತೆ ಸೆರಗನ್ನು ಸವರಿಸಿಕೊಂಡು, ರಾಯನ ಮುಖ ನೋಡಿದಳು. ಅದಕ್ಕೆ ರಾಜ "ಏನೂ ಇಲ್ಲ. ಸ್ವಲ್ಪ ರಸ ಚಿಮ್ಮಿತು, ಇದೊ ಇಲ್ಲಿ!" ಎಂದು ಅಲ್ಲಿ ಒಂದು ಉಗುರುಗೆರೆ ಎಳೆದ.

ಹೀಗೆಯೇ ಅವರಿಬ್ಬರೂ ನಕ್ಕು ನಲಿಯುತ್ತಾ, ಬಾಯಿಗೆ ಬಾಯಿಕ್ಕಿ ವೀಳೆಯ ಕೊಳ್ಳುತ್ತಾ, ಗಾನವನ್ನು ಕೇಳಿಸುತ್ತಾ ಕೇಳುತ್ತಾ ಸುಮ್ಮಾನದಿಂದ ಹೊತ್ತು ಹೋದುದೇ ಗೊತ್ತಾಗದ ಹಾಗೆ ಮೈಮರೆತಿರುವಾಗ ಅರಮನೆಯ ಕಾವಲು ಗಡಿಯಾರದಲ್ಲಿ ಶಂಖದ ಧ್ವನಿಯಾಯಿತು.

"ಗಾನ ಸಾಕು. ಅತಿ ವೇಳೆಯಾಯಿತು" ಎಂದ, ಅರಸ.

ಕುಸುಮಾಜಿ ಆದಿಜಿನೇಶ್ವರನನ್ನು ಕುರಿತು ಮಂಗಲವನ್ನು ಹಾಡಿ, ವೀಣೆಯನ್ನು ಪಕ್ಕಕ್ಕೆ ಎತ್ತಿರಿಸಿ, ಭಕ್ತಿಯಿಂದ ಭರತನ ಕಾಲಿಗೆ ಎರಗಿ, ಎದ್ದಳು.

"ಸಂಜ್ಞೆಯಾಯಿತು, ದೇವ. ಸಂಜೆಯ ಊಟಕ್ಕೆ ಇನ್ನು ಮನೆಗೆ ಹೋಗೋಣ?" ಎಂದಳು.

"ಬೇಡ. ಅನ್ನಪಾನಗಳನ್ನು ಇಲ್ಲಿಗೇ ತರಿಸು" ಎಂದ, ರಾಜೇಂದ್ರ.

ಕುಸುಮಾಜಿ ಕೆಳಗಿಳಿದು ಹೋದಳು. ಸಖಿಯರೊಡನೆ ಅನ್ನಪಾನ ಗಳನ್ನು ತೆಗೆಸಿಕೊಂಡು ಬಂದಳು. ನಾಮುನಿ ಅದನ್ನು ಬಡಿಸಿದಳು. ಅದೇ ಉಪ್ಪರಿಗೆಯಲ್ಲಿ ಬೇರೆ ಒಂದು ಕೋಣೆ; ಅಲ್ಲಿ ಆ ಗಂಡಹೆಂಡಿರು ಊಟ ಮಾಡಿದರು.

ಊಟ ಮುಗಿದು, ಮತ್ತೆ ಮಂಚವನ್ನು ಏರಿ, ಕುಸುಮಾಜಿಯ ಕೈಯಿಂದ ವೀಳೆಯವನ್ನು ಕೊಳ್ಳುತ್ತಾ ಅರಸನು ಇರುವಾಗ, ಕುಸುಮಾಜಿ ವೇಳೆ ನೋಡಿಕೊಂಡು, "ನಮ್ಮ ಮನೆಯ ನರ್ತನದ ಬಾಲೆಯರು ಬಂದು ಹೋದರು, ಅರಸ!" ಎಂದು ವಿಜ್ಞಾಪಿಸಿದಳು.

"ಬಂದದ್ದು ಏನು? ಹೋದದ್ದು ಏನು? ನಿನ್ನೊಡನೆ ಏನು ಹೇಳಿದರು? ಹೇಳು, ಹೇಳು, ಸಂಕೋಚವೇನು?"

"ರಾತ್ರೆಗೆ ದೇವರು ಬಂದು, ಅವರ ನರ್ತನವನ್ನು ನೋಡಿ ಪವಿತ್ರ ಮಾಡಬೇಕಂತೆ. ಅದಕ್ಕೆ ಬಂದಿದ್ದರು.

"ಆಗಲಿ, ಕುಸುಮಾಜಿ."

"ಇಲ್ಲಿ ಬಾ, ಕುಸುಮಾಜಿ. ಇದೆಕೊ" ಎಂದು ದೊರೆಯು ತನ್ನ ಕಿವಿಯ ಚೌಕುಳಿ ಒಂದು ಹೊರತು ಉಳಿದೆಲ್ಲ ಅಲಂಕಾರಗಳನ್ನೂ ಆಕೆಗೆ ಒಲಿದು ತೆಗೆದುಕೊಟ್ಟ.

ಆಕೆ ಅದನ್ನು ಒಲ್ಲಳು. "ನೀನು ನನ್ನ ಮನೆಗೆ ಬಂದದ್ದೇ ನನಗೆ ಸ್ವರ್ಗಲೋಕದ ಸಂಪತ್ತು. ನಿನ್ನ ಸೇವಕಿ ನಾನು. ನನಗೇಕೆ ಇಷ್ಟು ಬಾಹ್ಯೋಪಚಾರ?" ಎಂದಳು.

"ಅಲ್ಲಿ ಸಭೆಯಲ್ಲಿ ನಾನು ಏನು ಕೊಟ್ಟರೂ ನೀವು ಯಾರೂ ಮುಟ್ಟ

ಲಿಲ್ಲ. ಇಲ್ಲಿ ಏಕಾಂತದಲ್ಲಿ ನಾನು ಕೊಟ್ಟಿದ್ದನ್ನು ಬೇಡವೆನ್ನಬೇಡ. ನನ್ನ ಮನಸ್ಸಿನ ಆಸೆ ಇದು. ಇದನ್ನು ನಡಸು."

"ನನಗೆ ಈಗ ಆಭರಣಗಳಿಗೇನೂ ಕೊರತೆಯಿಲ್ಲ."

"ಆದರೂ ನನ್ನಾಣೆ. ಬೇರೆ ಏನೂ ಹೇಳಬೇಡ" ಎಂದು ಅರಸನು ಬಲವಂತದಿಂದ ಅವಳ ಕೈಹಿಡಿದು, ತನ್ನ ರತ್ನಾಭರಣಗಳನ್ನೆಲ್ಲ ತೆಗೆದುಕೊಟ್ಟ. ತನ್ನ ಮನಸ್ಸನ್ನು ಸೂರೆಗೊಂಡ ತನ್ನ ಕಾಂತಾಮಣಿಗೆ ತನ್ನ ಆಭರಣಗಳನ್ನು ಸೂರೆಗೊಟ್ಟ.

ಮತ್ತೆ, ನಾದುನಿಗೆ ಉಡುಗೊರೆಯಿತ್ತ. ಉಳಿದ ಊಳಿಗದ ಹೆಣ್ಣು ಗಳಿಗೂ ಸನ್ಮಾನ ಮಾಡಿದ.

ಅಷ್ಟುಹೊತ್ತಿಗೆ ಸೂರ್ಯಬಿಂಬ ಅಸ್ತಗಿರಿಯ ತುದಿಯಿಂದ ಮರೆಯಾಗು ತ್ತಿದ್ದುದು ಕಿಟಕಿಯ ಆಚೆ ಕಾಣಿಸಿತು.

## ೫

ಅರಸನು ಎದ್ದನು. ಶುಚಿಯಾಗಿ ಬಂದು, ಜಿನರಿಗೂ ಸಿದ್ಧರಿಗೂ ಉಚಿತವಾದ ಅರ್ಘ್ಯಪಾದ್ಯಗಳನ್ನು ಕೊಟ್ಟು, ಸ್ಥಿರವಾದ ಆಸನದಲ್ಲಿ ಕುಳಿತು, ಕಣ್ಣುಗಳನ್ನು ಮುಚ್ಚಿ ಆತ್ಮಯೋಗದಲ್ಲಿದ್ದನು.

ಇಷ್ಟು ಹೊತ್ತೂ ತನ್ನ ಪ್ರಿಯೆಯೊಡನೆ ಸುಖದ ಕೇಳಿಯಲ್ಲಿದ್ದುದು ಹಳೆಯ ನೆನಪಾಯಿತು. ತನ್ನೊಳಗೆ ಕಂಡ ಆತ್ಮದ ಗುರುತು ಹೊಸ ನೆನಪಾಯಿತು. ಹಿಂದೆ ಭೋಗದಲ್ಲಿದ್ದವನು ಈಗ ಯೋಗಕ್ಕೆ ಸಲ್ಲುವಾಗ ಹಿಂದಿನ ವಾಸನೆ ಸ್ವಲ್ಪವೂ ಇಲ್ಲ. ಒಂದು ವಸ್ತ್ರವನ್ನು ಬಿಟ್ಟು ಇನ್ನೊಂದನ್ನು ಹೊದೆದಂತೆ ಎರಡು ಭಾವಗಳೂ ಅವನಲ್ಲಿ ಒಪ್ಪುತ್ತಿದ್ದುವು.

ದೇಹವೇ ಜಿನಾಲಯ. ಮನಸ್ಸೇ ಸಿಂಹಾಸನ. ಅನುಪಮವಾದ ಆತ್ಮವೇ ಜಿನಮೂರ್ತಿ. ಹೀಗೆ ತನಗಾಗಿ ತನ್ನಿಂದ ತನ್ನನ್ನು ತಾನು ನೋಡುತ್ತಿದ್ದನು, ಸರ್ವಚಿಂತೆಯನ್ನು ನೀಗಿ. ಕರ್ಮ ಜಾರುತ್ತಿತ್ತು. ಕಾಂಕ್ಷೆ ಹಾರುತ್ತಿತ್ತು. ಚಿದಾನಂದದ ಚಿತ್‌ಪ್ರಕಾಶ ಮೀರುತ್ತಿತ್ತು. ರಾಜನು ತನ್ನ ಬುದ್ಧಿಯೊಳಗೇ ಒಂದು ಬೆಳುದಿಂಗಳಿನಂತಹ ಸಿದ್ಧಬಿಂಬ

ವನ್ನು ರಚಿಸಿ, ಅದಕ್ಕೆ ಮಾನಸಪೂಜೆಯನ್ನು ಸಲ್ಲಿಸಿ, "ಸಿದ್ಧೋಽಹಂ" ಎಂದು ಮುಕ್ತಿಸುಖವನ್ನು ಸವಿನೋಡುತ್ತಿದ್ದನು.

ಅಷ್ಟುಹೊತ್ತಿಗೆ, ಮಾಣಿಕ್ಯದ ಚೆಂಡನ್ನು ಎಸೆದುಬಿಟ್ಟ ಹಾಗೆ ಸೂರ್ಯನು ಮರೆಯಾದನು. ಕತ್ತಲೆ ಸುತ್ತಲೂ ಕವಿಯಿತು. ನಕ್ಷತ್ರಗಳು ಕಾಣಿಸಿಕೊಂಡವು.

# ಭಾಗ ನಾಲ್ಕು: ನಟುವನ ಮಕ್ಕಳು

## ೧

ಎಲ್ಲವನ್ನೂ ಮರೆತು, ತನ್ನ ಆತ್ಮವನ್ನು ಅರಿತು, ತನ್ನಲ್ಲಿ ತಾನು ಹೀಗೆ ಯೋಗದಲ್ಲಿ ತಲ್ಲೀನನಾಗಿ ನಾಲ್ಕು ಗಳಿಗೆಯಿದ್ದು, ಅರಸನು ಕಣ್ಣು ತೆರೆದನು. ಅವನ ಬಳಿಯಲ್ಲಿ ನಿಂತಿದ್ದ ಹೆಣ್ಣು "ದೇವ, ಸಮಯ ವಾಯಿತು" ಎಂದಳು. ಅರಸನು ಶೃಂಗಾರವಮಾಡಿಕೊಂಡು, "ಶರಣು, ದಿವ್ಯ ಜಿನಸಿದ್ಧ!" ಎಂದು ಎದ್ದನು. ತಾವರೆಯನ್ನು ಏರಿದ್ದ ಕಲಹಂಸ ಮತ್ತೊಂದು ಹೂವಿನ ವನಕ್ಕೆ ಹೋಗುವಂತೆ, ಆ ರಾಯನು ಹೂವಿನ ಉಪ್ಪರಿಗೆಯಿಂದ ಇಳಿದು, ನಾಟಕಶಾಲೆಗೆ ನಡೆದನು.

ಮಣಿಯ ಆಭರಣಗಳನ್ನು ತೊಟ್ಟು, ಚಂದ್ರಮುಖಿಯಾದ ಕುಸುಮಾಜಿಯ ಕೈಹಿಡಿದು, ಆತನು ಮಾಡದಿಂದ ಕೆಳಗಿಳಿದರೆ — ನಕ್ಷತ್ರದ ನಡುವೆ ಚಂದ್ರ ನಡೆವಹಾಗಿತ್ತು, ರೋಹಿಣಿಯೊಡನೆ ಚಂದ್ರ ಬಂದ ಹಾಗಿತ್ತು.

ಮಹಡಿಯಿಂದ ಇಳಿದು, ಮೇಲುಮಾಳಿಗೆಯಲ್ಲಿ ನಿಲ್ಲದೆ, ಕೆಳಗೆ ಬಂದು, "ನೀನು ಮಿಕ್ಕ ಸ್ತ್ರೀಯರ ಜೊತೆಯಲ್ಲಿ ಬಾ" ಎಂದು ಕುಸುಮಾಜಿಯನ್ನು ನಿಲ್ಲಿಸಿ, ಅರಸನು ನಾಟಕಶಾಲೆಗೆ ನಡೆದನು.

ಸೇವಕಿಯರು ಹಾವುಗೆ, ಚಾಮರ, ಎಲೆಯ ಚೀಲ, ಗಿಂಡಿಗಳನ್ನು ಹಿಡಿದು ಹೊರಟರು. ಕಂಚುಕಿಯರು "ಪಾದಾವಧಾನ! ಎಚ್ಚರಿಕೆ!" ಎಂದು ಬಿನ್ನವಿಸುತ್ತ ದಾರಿ ತೋರಿದರು.

ರಾಜನು ಆಯ್ದುಆಯ್ದು ತೊಟ್ಟಿದ್ದ ಮಾಣಿಕಗಳು ತಂಪಾದ ಬೆಳಕಿನ ದೀವಿಗೆಗಳಂತಿದ್ದುವು. ಕೈದೀವಿಗೆ ಮುಂದೆ ಸುಮ್ಮನೆ ನೆಪಕ್ಕಿತ್ತು, ರಾಜನು ಮೈದೀವಿಗೆಯಲ್ಲಿ ನಡೆದನು.

ನಡೆದು ಬಂದು, ನಾಟಕಶಾಲೆಯನ್ನು ಹೊಕ್ಕು, ಅಲ್ಲಿನ ಉನ್ನತವಾದ ಸಿಂಹಾಸನದಲ್ಲಿ ಏರಿ ಕುಳಿತನು.

ಆ ನಾಟಕಶಾಲೆಯನ್ನು 'ಹಾಗಿತ್ತು, ಹೀಗಿತ್ತು' ಎಂದು ನಾನು ಏನು ವರ್ಣಿಸಲಿ! ಕೋಟಿರತ್ನಗಳಿಂದಾದ ಅಮರರ ವಿಮಾನಕ್ಕೆ ಸಾಟಿಯಾಗಿತ್ತೆಂದು ಹೇಳಿಬಿಡುತ್ತೇನೆ! ಚಿನ್ನದ ಕಂಬ, ಚಿನ್ನದ ಗೋಡೆ, ಚಿನ್ನದ ತೊಲೆ– ಇವುಗಳಿಂದ ಆ ನಾಟಕಶಾಲೆ ರಾತ್ರೆ ಹಗಲು ಎನ್ನದೆ ತಂಪಿನ ಮಳೆ ಕರೆಯುವುದು. ಕುಂಕುಮ ಪನ್ನೀರು ಕಸ್ತೂರಿಗಳಿಂದ ಸಾರಿಸಿ ಚಿಮುಕಿಸಿ, ಅದರ ಸಿರಿಗಂಪು ಹೊಮ್ಮುತ್ತಿದ್ದರೆ, ಆ ನಾಟಕಶಾಲೆ ಸ್ವರ್ಗದ ಸುವಾಸನೆಯನ್ನು ತುಂಬಿಟ್ಟ ಚಿನ್ನದ ಕರಡಿಗೆಯಿದ್ದ ಹಾಗಿತ್ತು. ಕಟ್ಟಿದ ಪುಷ್ಪಮಾಲೆಗಳಿಂದ, ತೂಗಿದ ಹೂವಿನ ಕುಚ್ಚಿಂದ, ಕೆದರಿದ ಹೂಗಳ ಹಾರಗಳಿಂದ ಆ ನಾಟಕಶಾಲೆ ಪುಷ್ಪಾಯುಧನ ನಾಟಕಶಾಲೆಯ ಹಾಗಿತ್ತು. ಮೇಲುಕಟ್ಟಿನ ರತ್ನಗಳು ನೆಲಕಟ್ಟಿನ ನೀಲರತ್ನದಲ್ಲಿ ಪ್ರತಿಬಿಂಬಿಸಿದರೆ, ಸಾಲಾಗಿ ಬಿಳಿಯ ನೊರೆಎದ್ದ ಮಡುವೋ ಎಂಬ ಶಂಕೆ ನೋಟಕರಿಗೆ ಉಂಟಾಗುತ್ತಿತ್ತು. ಮೇಲೆ ಎತ್ತಿದ್ದ ಮುತ್ತಿನ ಕುಚ್ಚು, ಮಾಣಿಕ್ಯಗಳ ಮಾಲೆ ಕೆಳಗಿನ ನೆಲದಲ್ಲಿ ಹೊಳೆದು ತೋರಿದರೆ, 'ಮುತ್ತು ಮಾಣಿಕಗಳನ್ನು ತಂದು ಈ ಮನೆಯಲ್ಲಿ ಏಕೆ ಬಿತ್ತಿದರು ?' ಎನ್ನಿಸುತ್ತಿತ್ತು. ಸುತ್ತಲೂ ಅಲ್ಲಲ್ಲೇ ಸುತ್ತಿನ ಗೋಡೆಯಲ್ಲಿ ರತ್ನದ ಕನ್ನಡಿಗಳು. ಮೇಲುಕಟ್ಟಿನ ಪಟ್ಟಿಯ ಪರ್ವತದ ನಡುವೆ ಅಲ್ಲಲ್ಲೆ ಬೊಂಬೆಗಳು, ಕಂಬಗಳಲ್ಲಿ ಅಲ್ಲಲ್ಲೆ ರಂಭೆ ಮೇನಕೆಯರ ರೂಪಿನ ಲಲನಾ ಪ್ರತಿಮೆಗಳು, ಮಣಿಯಿಂದ ಮಾಡಿದ್ದು. ಗೋಡೆಯಲ್ಲೂ ಹಲವು ಹೆಣ್ಣುಗಂಡುಗಳ ರೂಪ — ಕೆಲವು ಮುನಿದು ಮೋರೆಯನ್ನು ಅತ್ತ ತೆಗೆದ ಹಾಗೆ, ಕೆಲವು ಕರಗಿ ಕಾಲಿಗೆ ಎರಗಿ ಕೋಪವನ್ನು ಕಳೆಯುವ ಹಾಗೆ, ಕೆಲವು ಗಿಳಿಗೆ ಏನೋ ಹೇಳುವ ಹಾಗೆ, ಕೆಲವು ವೀಣೆಯನ್ನು ನುಡಿಸುವ ಹಾಗೆ, ಕೆಲವು ನರ್ತನ ಮಾಡುವ ಹಾಗೆ—ಅಲ್ಲಲ್ಲಿ ಹೆಣ್ಣುರೂಪಿನ ಪುತ್ಥಳಿಗಳು.

ಮತ್ತೆ, ಚಕ್ರನಾಥನಾದ ಭರತನ ಬೆನ್ನಿನ ಹೊನ್ನ ಗೋಡೆಯಲ್ಲಿ ಧರ್ಮಚಕ್ರನಾಥನಾದ ಆದಿ ತೀರ್ಥಂಕರನ ವಿಶ್ರಾಂತವಾದ ರೂಪು–ನವರತ್ನದಲ್ಲಿ ಸಮಾಕ್ರಾಂತವಾಗಿ. ಮತ್ತೆ ಹಣೆಯ ಮೇಲುಗಡೆ, ಚಿನ್ನದ ತೊಲೆಯಲ್ಲಿ, ಹೊಸ ಸ್ಫಟಿಕದಲ್ಲಿ ಕಡೆದ ಎರಡು ಸಿದ್ಧಬಿಂಬಗಳು – ಎಡಕ್ಕೆ ಒಂದು, ಬಲಕ್ಕೆ ಒಂದು.

ಸಾಕ್ಷಾತ್ ವಿಶ್ವಕರ್ಮನೇ ಭರತಚಕ್ರೇಶ್ವರನನ್ನು ಪರಮ ಪ್ರೀತಿಯಿಂದ ಸೇವಿಸುವನು ಎಂದಮೇಲೆ, ಅವನು ನಿರ್ಮಿಸಿದ ರಾಜಭವನದ ನಾಟಕಶಾಲೆಯನ್ನು ಬೇರೆ ಮಾತಿನಲ್ಲಿ ಹೇಳುವುದೇನು!

ಹೀಗೆ ಲೋಕಕ್ಕೇ ವಿಸ್ಮಯವಾದ ನಾಟಕಶಾಲೆಯಲ್ಲಿ ಅರಸನ ಓಲಗವಾದ ಕೂಡಲೆ, ಕಲಾವಿದರು ತಕ್ಕಂತೆ ಸಿಂಗರಮಾಡಿಕೊಂಡು, ಪರಿಮಳಗಳ ಹೊಸ ಕಂಪನ್ನು ಬೀರುತ್ತ ಬಂದರು. ರಾಜಕುಮಾರರು, ರಸಿಕರು, ಪಂಡಿತರು, ಅಧಿರಾಜರು, ಕವಿಗಳು, ಗಮಕಿಗಳು, ಬಂದು ಭರತರಾಜನನ್ನು ಕಂಡು ಕೈಮುಗಿದು ಕುಳಿತರು. ಗಣಿಕೆಯರು, ನಾಟ್ಯಶಾಸ್ತ್ರ ಲಕ್ಷಣ ತಿಳಿದವರು, ಭಾವಗಳನ್ನು ಗ್ರಹಿಸುವವರು, ಮಂತ್ರಿಗಳು ಅರಸನನ್ನು ಕಂಡು, ಸಾಲುಸಾಲಾಗಿ ಕುಳಿತರು. ಅರಸನಿಗೆ ಆಪ್ತರಾದ ವಿಟ, ವಿದೂಷಕ, ಪೀಠಮರ್ದಕ ಮುಂತಾದ ಮಿತ್ರರು ಬಂದು ಅರಸನ ಒತ್ತಿನಲ್ಲಿ ಕುಳಿತರು.

ವೃದ್ಧನೂ ಉತ್ತಮನೂ ವಿವೇಕಿಯೂ ಪತಿಯ ಕಾರ್ಯದಲ್ಲಿ ತತ್ಪರನೂ ಆದ ಬುದ್ಧಿಸಾಗರನೆಂಬ ಮುಖ್ಯಪ್ರಧಾನನು ಬಂದು ಒಡೆಯನ ಎದುರಿಗೆ ಕುಳಿತನು.

ಅರಸನ ಎಡಬಲಗಳಲ್ಲಿ, ತೆರೆಯ ವಸ್ತ್ರದ ಮರೆಯಲ್ಲಿ, ತೆರೆದ ಗವಾಕ್ಷದಿಂದ ಹೊರಗಿನ ಜನರನ್ನು ನೋಡುತ್ತ, ಅರಸಿಯರು ಇದ್ದರು.

"ಒಲೆಯದಿರಿ! ಒತ್ತದಿರಿ! ಒಯ್ಯಾರದಿಂದ ಕುಳ್ಳಿರಿ! ಉಲಿಯದಿರಿ!'' ಎಂದು ಕಟ್ಟಿಗೆಕಾರರು ಅಲ್ಲಲ್ಲೆ ಸುಳಿದು, ಸಂದರ್ಭಕ್ಕೆ ತಕ್ಕಂತೆ ನುಡಿದು ತಿದ್ದುವರು.

ಪರಿಚಾರಕರು ರಾಜನ ಅನುಮತಿಯಿಂದ ಅಲ್ಲಿ ಒಬ್ಬರಿಗೆ ಪರಿಮಳ, ಇಲ್ಲಿ ಒಬ್ಬರಿಗೆ ಉಚಿತವಾದ ಆಸನ, ಮತ್ತೆ ಅಲ್ಲಿ ಇನ್ನೊಬ್ಬರಿಗೆ ಕರ್ಪೂರ ವೀಳೆಯ – ಹೀಗೆ ತರತರ ಅರಿತು, ಸಭೆಯನ್ನು ಮನ್ನಿಸಿದರು.

೨

ತಾಳಧಾರಿ ತಾಳವನ್ನು ಹಿಡಿದು ನಿಂತನು. ನೃತ್ಯದ ತಾಳ ತೋರಿ ಬರುವಂತೆ ತಾಳವನ್ನು ಕೇಳಿಸಿದನು.

ಮದ್ದಳೆಯವನು ಮದ್ದಳೆಯನ್ನು ತೊಡೆಗಿಟ್ಟು, ಕೊರಳು ಕೊಂಕಿಸಿ, ಎಡಕಿವಿಯನ್ನು ಶ್ರುತಿಗೆ ಕೊಟ್ಟು, ಇದುವರೆಗೆ ಇಂಥದನ್ನು ಕೇಳಿರಲಿಲ್ಲ ಎನ್ನುವಂತೆ ಬಾರಿಸಿದನು.

ಆವುಜ, ಢಕ್ಕೆ, ನಾಟ್ಯಾನಕ, ಚಂಪೆ, ಕಿಂಕಿಣಿ ಮೊದಲಾದ ಇತರ ಹಲವಾರು ವಾದ್ಯಗಳು ಮದ್ದಳೆಗೆ ಜೊತೆಯಾಗಿ ಕೂಡಿದುವು.

ವಾದ್ಯರಂಜನೆ ಆದಕೂಡಲೆ, ಮಹಾಗಾನವಿದ್ಯರಾದವರು ಆಯೆಂದು ರಾಗಗಳನ್ನು ಎತ್ತಿ ಹಾಡಿದರು.

ತಂಬೂರಿ, ವೀಣೆ, ಮುಖವೀಣೆ, ವೇಣು ಮುಂತಾದವುಗಳ ಸಖತನ ಒಪ್ಪುವಹಾಗೆ ವಾದಕರು ಸ್ವರ್ಗಸುಖವನ್ನು ಕರೆದು ತೋರಿದರು.

ಆಹಿರಿಯಲ್ಲಿ, ತೋಡಿಯಲ್ಲಿ, ನಾಟಿಯಲ್ಲಿ, ಸಾರಂಗದಲ್ಲಿ – ಬೇರೆ ಬೇರೆ ರಾಗಗಳಲ್ಲಿ ಹಾಡಿ ಹಾಡಿ, ಸಭೆಗೆ ಸಮ್ಮೋಹನದ ರಸವನ್ನು ಚಿಮ್ಮಿದರು.

ಮೊದಲು, ಆದಿಜಿನೇಶನನ್ನು, ಸಿದ್ಧರನ್ನು, ಮುನಿಗಳನ್ನು, ಶ್ರೀ ದಿವ್ಯ ಹಂಸನಾಥನನ್ನು ನಾದಪೂಜೆಯಲ್ಲಿ ಪೂಜಿಸಿ, ಆ ಗಾಯಕರು ಭರತ ಚಕ್ರೇಶನಿಗೆ ಸಂತೋಷಮಾಡಿದರು.

ಅನಂತರ ಗಾನದಲ್ಲಿ ಅನುಗತವಾಗಿ, ಆ ವಾದ್ಯಸಂಕುಲದಲ್ಲಿ ಮೇಳೈಸಿ, ತಾವೆಲ್ಲ ಒಳಗೆ ಸರಿದರು. ಅಲ್ಲಿ, ಆ ತೆರೆಯ ಮರೆಯ ಪಾತ್ರಗಳ ಜೊತೆಗೆ ನಿಂತು ಹಾಡಿದರು.

ಮೇಘದ ಬಣ್ಣದ ತೆಳುತೆರೆಯ ಹಿಂದೆ ಆ ಅಮೋಘದ ಪಾತ್ರದ ತರುಣಿಯರು ನಿಂತಿದ್ದರೆ, ಘನಕುಚದ ತಾರಾಸತಿಯರು ಕೆಂಪುಮೇಘದ ಮರೆಯಲ್ಲಿ ನಿಂತಹಾಗಿತ್ತು.

ನರ್ತನಕ್ಕೆ ಪೂರ್ವಭಾವಿಯಾಗಿ ನಡೆಯುವ ಗಾನವನ್ನು ಹಾಗೇ ಮೆಲ್ಲನೆ ಸ್ವಲ್ಪ ನಿಲ್ಲಿಸಿ, ನೃತ್ಯವಿದ್ಯಾಧರನೆಂಬ ನಟುವನು ರಂಗದ ಮುಂದೆ ಬಂದನು. ತಲೆಗೆ ಚುಂಗು ಸುತ್ತಿದ್ದ ಹಚ್ಚಡ, ಕೈಗೆ ಚಿನ್ನದ ಕಟ್ಟುಹಾಕಿದ್ದ ಸೆಳೆಬೆತ್ತ. ಬಂದವನು ಭೂಪತಿಗೆ ಸಾಷ್ಟಾಂಗಮಾಡಿ, ಎದ್ದುನಿಂತು, ವಿಜ್ಞಾಪಿಸಿದನು.

"ವಿವಿಧವಾದ ವಿದ್ಯಾಂಗಗಳನ್ನು ಪರೀಕ್ಷೆಮಾಡುವ ಕುಶಲಿ ನೀನು. ನಿನ್ನನ್ನು ಸಂಪೂರ್ಣವಾಗಿ ಮೆಚ್ಚಿಸುವ ಸುಮಾರ್ಗದ ನಾಟಕ ಸ್ವರ್ಗದಲ್ಲಾದರೂ ಉಂಟೋ ಇಲ್ಲವೊ! ಆದರೂ, ಇದು ಮಾರ್ಗ ಎಂದು ಎರಡು ಪಾತ್ರಗಳನ್ನು ತಿದ್ದಿದ್ದೇನೆ. ನಿನ್ನ ಕಣ್ಣಿನ ಕೊನೆಯಿಂದ ನೋಡಿದರೂ ಸಾಕು. ಈ ಪಾತ್ರದ ತರುಣಿಯರು ಇಬ್ಬರೂ — ಒಬ್ಬಳು ನೇತ್ರಮೋಹಿನಿ, ಇನ್ನೊಬ್ಬಳು ಚಿತ್ತಮೋಹಿನಿ — ಇವರು ನನ್ನ ಮಕ್ಕಳು."

— ಎಂದು ಕೈಮುಗಿದು, ನೃತ್ಯವಿದ್ಯಾಧರನು ಪಾತ್ರಗಳು ಇದ್ದ ಕಡೆಗೆ ಸರಿದು ಮರೆಯಾದನು.

ನಾಳಂಗರಾಗವನ್ನು ಎತ್ತಿ, ಮದ್ದಳೆ ತಾಳ ಮೇಳ ಶ್ರುತಿಗಳು ಒಂದುಗೂಡಿ ಲೋಲನಿರಂಜನಸಿದ್ಧನನ್ನು ಕುರಿತು ಹಾಡಿದರು.

ಸಂಜೆಯ ಕೆಂಪು ಸರಿದುಹೋಗುವ ಹಾಗೆ ತೆರೆ ತೊಲಗಿತು. ಕಣ್ಣಿಗೆ ಆ ಕಂಜಾಕ್ಷಿಯರು ಕಾಣಿಸಿದರು. ರಂಜಿಸುವ ತಮ್ಮ ನಳಿತೋಳ್ಗಳನ್ನು ಎತ್ತಿ, ಸುವರ್ಣಪುಷ್ಪಗಳನ್ನು ಬೊಗಸೆ ತುಂಬ ಎರಚಿದರು.

ನಡುವಿನಲ್ಲಿಟ್ಟ ಕೈ, ಪಸರಿಸಿದ ತೊಡೆ, ಉಬ್ಬಿದ ಮಡ — ಮಿಡುಕದೆ ನಿಂತು ನಿಲುವಿನ ರೇಖೆ ತೋರಿದರು. ಪಚ್ಚೆಯ ಚಲ್ಲಣ, ಪಂಚವರ್ಣದ ಕಾಸೆ, ಬಿಗಿಯಾಗಿ ಕಟ್ಟಿದ ಮುತ್ತಿನ ಮೊಲೆಕಟ್ಟು — ನೋಡುವವರ ಮನಸ್ಸು ಹುಚ್ಚೆದ್ದು ಬೀಳುವ ಹಾಗೆ ಆ ಅಚ್ಚಜವ್ವನೆಯರು ಇದ್ದರು. 'ಇದನ್ನು ಇನ್ನು ತಿದ್ದಲು ಸಾಧ್ಯವಿಲ್ಲ' ಎಂಬಂಥ ಮೈಯ ಕಟ್ಟಾಯ, ಒಳ್ಳೇ ಏರುವ ಪ್ರಾಯ. 'ನಟ್ಟುವರಲ್ಲಿ ಹುಟ್ಟಲು ಇವರೇ ತಕ್ಕವರು' ಎಂಬಂಥ ಕಟ್ಟಾಣಿ ಹೆಣ್ಣುಗಳು. ತೊಟ್ಟ ಶೃಂಗಾರದ ಕೊಂಕುಬಿಂಕ. ರಸ ತೊಟ್ಟಿಡುವಂಥ ಲಾವಣ್ಯ. ಮುಟ್ಟಿದರೆ ಕಂದಿಹೋಗುವ ಮೈ ಎನ್ನಿಸುವ ಆ ಹೆಣ್ಣುಗಳು ನಿಂತ ನಿಲವು ಆ ರಾಜಸಭೆಯನ್ನು ಸೋಲಿಸಿತು.

೩

ನೇತ್ರಮೋಹಿನಿ ಮೆಲ್ಲನೆ ಒಲೆದು, ರಾಜನನ್ನು ನೋಡಿ, ನೇತ್ರಸುಖವನ್ನು ಸೂಚಿಸಿದಳು. ಚಿತ್ತಮೋಹಿನಿ ನೋಡಿ, ಚಿತ್ತವನ್ನು ಸೂತ್ರದಂತೆ ಅಲುಗಾಡಿಸಿದಳು.

ಹಜ್ಜೆ ಸರಿದು, ಮೆಲ್ಲನೆ ಚಲಿಸಿದರು. ಕಾಲಿನ ಹೊನ್ನಗೆಜ್ಜೆ ಝುಲಿರು ಝುಲಿರು ಎಂದಿತು. ಸಜ್ಜಾದ ಮೊಲೆಯ ಆ ಹೆಣ್ಣುಗಳು ಮುಖಕಾಂತಿಯನ್ನು ಪ್ರಜ್ವಲಿಸುತ್ತ ಮುಂದೆ ನಡೆದರು. ಒಮ್ಮೆ, ನೋಟಕರನ್ನು ನೋಟದಿಂದ ಕೊಂದರು – ತಮ್ಮ ನಸುನಗೆಯನ್ನು ಅವರಲ್ಲಿ ನಾಟಿ. ಇನ್ನೊಮ್ಮೆ, ಅವರ ಎದೆಯ ಕೋಟೆಯನ್ನು ತಮ್ಮ ಮೈಯ ಒಲೆದಾಟದಿಂದ ಕೊಂಡು, ಲೂಟಿ ಮಾಡಿದರು. ಒಬ್ಬಳು ಬಲಮುರಿಯಾಗಿ, ಒಬ್ಬಳು ಎಡಮುರಿಯಾಗಿ, ಹೊಂದಿ ಕೊಂಡು ಹರಿದರು. ಇಬ್ಬರೂ ಸುಳಿದಾಡಿ, ಒಬ್ಬಳು ಹಿಂದೆ ನಿಂತಳು, ಇನ್ನೊಬ್ಬಳು ರಂಗದಲ್ಲಿ ಆಡಿದಳು.

ನೇತ್ರಮೋಹಿನಿ ತಾಳಲಯಗಳನ್ನು ಅರಿತು, ಹೊಂಗಿ ಹೊಳೆದು ನರ್ತಿಸುತ್ತ ರಂಗದಲ್ಲಿದ್ದರೂ ಅವಳು ನೋಡುವ ಜನದ ಅಂತರಂಗದಲ್ಲಿ ಇದ್ದಳು. ತೋಳು ನೀಡಿದಳು – ಮನ್ಮಥನು ಒರೆಯಿಂದ ತನ್ನ ನೀಳವಾದ ಕತ್ತಿಯನ್ನು ನೀಡಿದನೋ ಎಂಬಂತೆ; ನೋಡುತ್ತಿದ್ದ ರಾಜಪುತ್ರರ ಎದೆ ಹೋಳಾಗಿಹೋಯಿತೋ ಎನ್ನುವಂತೆ. ಅವಳು ಎತ್ತೆತ್ತ ಹಸ್ತ ನೀಡಿದರೆ ಅತ್ತತ್ತ ಅವರ ದೃಷ್ಟಿ. ಅಲ್ಲೇ ಅವರ ಚಿತ್ತ. ಅಲ್ಲೇ ಅವರ ಎಲ್ಲ ರಸಭಾವ. ಅವಳು ತಟಪುಟ ಎಂದು ಹೆಜ್ಜೆ ಇಡುತ್ತಿದ್ದರೆ, ವಿಟರ ಎದೆ ಪಟಪಟ ಎಂದು ಹೊಡೆದುಕೊಳ್ಳುವುದು. ಅವಳು ಒಲಿದು ಕಾಲುನೀಡಿದರೆ, ಅಲ್ಲಿದ್ದ ರಾಜ ಸುತರು ತಮ್ಮನ್ನು ಮುನಿಸಿನಿಂದ ಒದೆದ ತಮ್ಮ ನಲ್ಲೆಯರನ್ನು ನೆನೆಯುವರು. ನೂರೆಂಟು ಕರಣ, ನೂರೆಂಟು ನಿಲುವು, ಹದಿಮೂರು ಶಿರೋಭೇದ, ಬೇರೆ ಬೇರೆ ಅರವತ್ತನಾಲ್ಕು ಭೇದದ ಹಸ್ತ — ಇವುಗಳನ್ನು ತೋರಿ ಆ ನೀರೆ ನರ್ತನವಮಾಡಿದಳು. ಭಾವ ವಿಭಾವ ಅನುಭಾವ ಮುಂತಾದ ಕಲಾವಿರ ಚನೆಯ ರೇಖೆಯನ್ನು ತೋರಿ, ಭಾವುಕರೆಲ್ಲರ ಚಿತ್ತವನ್ನೂ ರಂಜನೆಮಾಡಿ, ಆ ಭಾಮೆ ಹಿಂಗಡೆಗೆ ಸಾರಿದಳು.

ಚಿತ್ರಮೋಹಿನಿ ಬಂದಳು, ನಿಂತಳು – ನೋಟಕರ ಚಿತ್ತವೆಲ್ಲವನ್ನೂ ಚಿಗುರಿಸುತ್ತ. "ಈ ವೃತ್ತಕುಚಗಳ ಬಲುಭಾರವನ್ನು ಈ ಬಡನಡು ಹೊತ್ತು ನಿಂತದ್ದು ಚಿತ್ರ! ಈ ತೋರವಾದ ಕಟಿಗಳನ್ನು ಈ ತೊಡೆ ತಾಳಿ ದುದು ವಿಚಿತ್ರ! ಈ ದೊಡ್ಡ ಮುಡಿಯನ್ನು ಈ ನುಣುಗೊರಳು ಹೊತ್ತಿರು

ವುದು ಆಶ್ಚರ್ಯ! ನಡೆದು, ಒಲಿದು, ನರ್ತಿಸಿದರೆ ಏನಾಗುವಳೊ!" ಎಂದು ನೋಟಕರು ಎಣಿಸಿದರು.

ಮುದ್ದಲೆಯು ತಾಳದ ಅನುಗತಿಗೆ ಸರಿಯಾಗಿ ನಡೆದಳು. ದೊಡ್ಡ ಅಲೆಯಂತೆ ಮುಂದೊತ್ತಿ ಬಂದಳು; ಕಡಲಿನ ಉಬ್ಬರ ಹಿಮ್ಮೆಟ್ಟಿ ಇಳಿತ ವಾಗುವಂತೆ ಹಿಂದಕ್ಕೆ ಹೋದಳು.

ದಿಗದಿಗಿ ಎಂದು ಎದುರಿಗೆ ಬರುವಳು – ನಸುನಗುತ್ತ ರಾಜನನ್ನು ಅಪ್ಪಿ ಕೊಳ್ಳುವಂತೆ. ಭುಗಿಲ್ಲನೆ ತಿರುಗುವಳು – ಅರಸನಲ್ಲಿ ಮುನಿದು, ಅತ್ತ ಮುಖವಿಕ್ಕಿ ಹೋಗುವಳು ಎಂಬಂತೆ.

ಅವಳು ಬರುವಾಗ, ಅವಳ ಮುಖ ಮೊಲೆ ನಡು ಹೆಜ್ಜೆಗಳನ್ನು ನೋಡಿ, ರಾಜಪುತ್ರರು ಮೋಹಗೊಳ್ಳುವರು. ಅವಳು ಹೋಗುವಾಗ ಅವಳ ಹಿಮ್ಮುಡಿ ಕಟಿ ಮುಡಿ ಬೆನ್ನು ನೋಡಿ ಉತ್ಸಾಹಗೊಳ್ಳುವರು.

ಸಮ್ಮೋಹನದ ಸಮುದ್ರದ ಸುಳಿಯೊ ಎಂಬ ಹಾಗೆ ನಾಟ್ಯದಲ್ಲಿ ಸುಳಿದು ಸುತ್ತುವಳು. ಎಳೆಬಿಸಿಲಲ್ಲಿ ಎಳೆನಾಗ ಹರಿಯುವಂತೆ ಎಡಕ್ಕೂ ಬಲಕ್ಕೂ ಒಲಿದು ತಿರುಗಿ ಹರಿಯುವಳು.

ರಂಗದಲ್ಲಿ ನಟಿಸಿ ಮೇಲೆ ನೆಗೆಯುವಳು – ಪುಟವೇರಿದ ಹೊಯ್ ಚೆಂಡಿನಂತೆ; 'ಕಟಿ ಕಚ ಕುಚಗಳ ಭಾರವನ್ನು ಈಕೆ ಹೊತ್ತು ನೆಗೆವ ಈ ಪಟುತನ ತುಂಬಾ ಲೇಸು!' ಎಂದು ಪ್ರೇಕ್ಷಕರು ಕೊಂಡಾಡು ವಂತೆ.

ಚಿತ್ತಮೋಹಿನಿ ಮುಗುಳ್ನಗೆಯಿಂದ ರಾಜನನ್ನು ನೋಡುವಳು, ಕೂಡಲೆ ಓರೆಮುಖದಿಂದ ನೋಟಕರನ್ನು ನೋಡುವಳು. ಹೊನ್ನಬುಗುರಿ ಮೊಲೆಯ ಆ ಮೋಹನಾಂಗಿ ಬುಗರಿಯಂತೆ ಒಲಿದಾಡುವಳು, ನಿಲ್ಲುವಳು. ಮೋರೆ ತಿರುಪಿನೋಡಿ ನಗುನಗುತ್ತ ರಾಜಸುತರಿಗೆ ಹುಬ್ಬು ಹಾರಿಸುವಳು. ಅದನ್ನು ಕಂಡು ಅವರ ಎದೆ ಹಾರುವುದು. ಮಾರನ ಮದದಾನೆ ಆ ನಾಟ್ಯ ರಂಗದಲ್ಲಿ ಸುಳಿದಾಡಿದಂತೆ ಆರಭಟೆಯ ನೃತ್ಯವನ್ನಾಡಿ, ಆ ಹೆಣ್ಣು ಹಿಂದೆ ಸರಿದಳು.

ಸಂಗೀತಗಾರರು ತಾಳಮೇಳವನ್ನು ಜೋಡಿಸಿಕೊಂಡು, ಜೋಕೆಯಿಂದ ದುಂಬಿಗಳ ಝೇಂಕಾರದಂತೆ ತಂಗಾಳಿಯ ತನಿಸುಯ್ಯುಂತೆ ಹಾಡಿದರು.

ಆ ಆಲಾಪವನ್ನು ಕೇಳುತ್ತ ಅವರಿಬ್ಬರೂ ನಿಂತರು. ನಾಟ್ಯಶಾಲೆ ಮೋಹನ ದಲ್ಲಿ ಮುಳುಗಿಹೋಯಿತು.

ಮತ್ತೆ, ಅವರು ಸೀಳಿ, ಮತ್ತೆ ಪಾರಿವಾಳದ ಹಕ್ಕಿಗಳಂತೆ ಬೆರಸಿ – ಈಗ ಇದಿರಾಗುವರು, ಆಗ ಬೆನ್ನಿಗೆ ಬೆನ್ನಾಗುವರು. 'ಇದೆ! ಅದೆ! ಇಲ್ಲಿ! ಅಲ್ಲಿ! ಇತ್ತ! ಅತ್ತ!' ಎನ್ನುವಂತೆ ಹೊಳೆದು, ಬಯಲಾದರು. ಮತ್ತೆ ಮತ್ತೆ, ಮತ್ತೆ ಮತ್ತೆ, ಆ ನೇತ್ರಮೋಹಿನಿ ಚಿತ್ರಮೋಹಿನಿ ಎಂಬ ಪಾತ್ರದ ಹೆಣ್ಣುಗಳು ಹೊಕ್ಕು, ಹೊಳೆದರು. ಕಣ್ಣುತೆರೆದು ನೋಡುವ ಸಭೆಗೆ ಮೋಹನದ ಇಂದ್ರಜಾಲವನ್ನು ಬೀಸಿದರು.

೪

ಅರಸನು ಗಿಂಡಿಯ ನೀರಿನಿಂದ ಬಾಯಿ ಮುಕ್ಕುಳಿಸಿ, ವೀಳೆಯವನ್ನು ಕೈಕೊಂಡು, ಪಾತ್ರದ ಹೆಣ್ಣುಗಳ ಆಟವನ್ನು ನೋಡಿ ತಲೆದೂಗಿದನು. ನಟಿ ನಟಿ ಎಂದು ಬಿಳಿಯೆಲೆಯನ್ನು ಸೀಳಿ ಗಳಿಗೆ ಮಡಿಸಿಕೊಟ್ಟರೆ, ಅದನ್ನು ಕಟಕಟ ಎಂದು ಕಚ್ಚಿಕೊಳ್ಳುತ್ತ, ರಾಜನು ಆ ನಟನವನ್ನು ನೋಡಿ ಮೆಚ್ಚಿದನು.

ಪಕ್ಕದಲ್ಲಿದ್ದ ವಿಟ ವಿದೂಷಕಾದಿಗಳು "ಸೊಬಗಾಯ್ತು, ಸ್ವಾಮಿ. ಇದು ತಾಂಡವನೃತ್ಯದ ಅಂಗ. ಇವರು ಕೊಂಡಾಡತಕ್ಕ ಪಾತ್ರಗಳೇ ಸರಿ! ಇವರ ರೂಪು ಚೆನ್ನು, ಇವರ ಶೃಂಗಾರ ಚೆನ್ನು, ಇವರ ಮೇಳ ಚೆನ್ನು, ಇವರ ಆಟ ಚೆನ್ನು. ಸುಗುಣವಾದ ವಿದ್ಯೆಯನ್ನು ಕಲಿತವರು ಸುಮುಖನಿಗೆ ತೋರಿದರೆ, ಅದು ಹಗಲಿನಲ್ಲಿ ಕನ್ನಡಿಯನ್ನು ನೋಡಿದಂತೆ. ಅದನ್ನೇ ದುರ್ಮುಖರಿಗೆ ತೋರಿದರೆ, ಅದು ಕತ್ತಲೆಯಲ್ಲಿ ಕನ್ನಡಿ ನೋಡಿದಂತೆ. ಪೂರ್ಣ ಚಕ್ರೇಶ್ವರನ ಎದುರಿನಲ್ಲಿ ಈ ಪೂರ್ಣ ಯೌವನೆಯರ ನೃತ್ಯ ಹೇಗಾಯಿತೆಂದರೆ – ಪೂರ್ಣಚಂದ್ರನನ್ನು ಕಂಡು ಹಾಲಕ್ಕಿಗಳು ಇಚ್ಛೆ ಪೂರ್ಣವಾಗಿ ಕುಣಿದ ಹಾಗೆ" ಎಂದು ತಮತಮಗೆ ಮಾತಾಡಿಕೊಂಡರು.

ಅನಂತರ "ಮುಂದೆ ಇನ್ನೂ ಬೇರೆ ಪಾತ್ರವುಂಟು. ಇವರನ್ನು ನಿಲ್ಲಿಸುವ ವೇಳೆಯಾಯಿತು" ಎಂದು ಅರಸನಿಗೆ ವೇಳೆಯರಿತು ವಿಜ್ಞಾಪಿಸಿ ಕೊಂಡರು.

ರಾಯನು ತನ್ನ ಸಮ್ಮತಿಯನ್ನು ಕಣ್ಣಿನಿಂದ ಸೂಚಿಸಿದನು. ಅಂದಿನ ನರ್ತನಕ್ಕೆ ಅಂತ್ಯಮಂಗಲವಾಗಲಿ ಎಂದು ನಟುವನಿಗೆ ಸೂಚನೆಯಾಯಿತು. ಪಾತ್ರದ ಹೆಣ್ಣುಗಳೊಡನೆ ಅವನೂ ಜೋಕೆಯಿಂದ ನಿಂತು, ಜಿನಸ್ತುತಿಮಾಡಿ ನಾಟಕವನ್ನು ಸಮಾಪ್ತಗೊಳಿಸಿದನು.

ಆ ಸಮಯದಲ್ಲಿ ಆ ನರ್ತನದ ಹೆಣ್ಣುಗಳಿಗೆ ದೇಹ ಬೆವರಿಟ್ಟಿತ್ತು, ಹಣೆಯ ತಿಲಕ ಕಲಕಿತ್ತು, ಮುಖದಲ್ಲಿ ಕೆಂಪುರಾಗ ಏರಿತ್ತು. ಅವರ ಮೈಗೆ ಒಂದು ಹೊಸ ಕಂಪು ಬಂದು ಸಂಗಡಿಸಿತ್ತು.

ರಾಜನು ಮೀಸೆಯನ್ನು ತಿದ್ದುತ್ತ, ನಗುತ್ತ, ಕಣ್ಣುಗಳ ಕಾಂತಿ ಸೂಸುತ್ತ ತನ್ನ ಆಪ್ತನಾದ ದಕ್ಷಿಣನಾಯಕನ ಕಡೆ ನೋಡಿದನು. ಅವನು ಆ ಸಂಜ್ಞೆಯನ್ನು ಅರಿತು, ನಟುವನನ್ನು ಕೈಬೀಸಿ ಕರೆದನು.

ಮುಂದೆ ಮಕ್ಕಳು, ಹಿಂದೆ ಮೇಳದವರು, ಮಕ್ಕಳ ನಡುವೆ ಭುಜ ಹೊಂದಿಸಿ ತಾನು – ಬಂದು, ಆ ನೃತ್ಯವಿದ್ಯಾಧರನು "ದೇವ! ಜೀಯಾ!" ಎನ್ನುತ್ತ ಆ ರಾಜನ ಮುಂದೆ ನಿಂತನು.

"ಸ್ವಾಮಿಯ ಚಿತ್ತಕ್ಕೆ ಬಂತೆ?" ಎಂದನು.

"ಈ ನೀರೆಯರು ಪಾತ್ರಶಿಖಾಮಣಿಗಳೈಯ್ಯಾ. ಬಹಳ ಚೆನ್ನಾಗಿ ಕಲಿಸಿದ್ದೀಯೆ" ಎಂದು ದಕ್ಷಿಣನಾಯಕನು ಅವನನ್ನು ಕೊಂಡಾಡಿದನು. "ಚಿತ್ತಮೋಹಿನಿ, ನೇತ್ರಮೋಹಿನಿ ಎಂದು ನೀನು ಇವರಿಗೆ ಕೊಟ್ಟ ಹೆಸರು ಇವರಿಗೆ ಸಲ್ಲುವುದು. ನಿಜವಾಗಿಯೂ ಇವರು ರಸಿಕರ ಚಿತ್ತಗಳನ್ನೂ ನೇತ್ರಗಳನ್ನೂ ಸೂರೆಗೊಂಡರು" ಎಂದನು.

"ಕೇಳು, ದಕ್ಷಿಣನಾಯಕ: ರಾಯನ ಪಾತ್ರದ ಲಕ್ಷಣಾಂಗಿಯರ ಮುಂದೆ ನಮ್ಮ ಪ್ರೇಕ್ಷಣ ಏತರದು? ಹಂಸೆಯ ಪಕ್ಕದಲ್ಲಿ ಬಕಪಕ್ಷಿ ನಡೆದ ಹಾಗೆ!" ಎಂದ, ನೃತ್ಯವಿದ್ಯಾಧರ.

ಅದಕ್ಕೆ ದೊರೆ ನಕ್ಕು, "ಹಾಗೆ ಹೇಳಬೇಡ, ನೃತ್ಯವಿದ್ಯಾಧರ. ನಿನ್ನ ಪುತ್ರಿಯರ ಸಾಧನೆ ಚೆಲುವು. ನೀನು ಒಲಿದು ಇವರಿಗೆ ವಿದ್ಯೆ ಕಲಿಸಿದ್ದು ತುಂಬ ಮಧುರವಾಗಿದೆ" ಎಂದ.

"ಬದುಕಿದೆ, ಸ್ವಾಮಿ. ನೀನು ಅಹುದು ಎಂದಮೇಲೆ, ನನಗೆ

ಇದಕ್ಕಿಂತ ಅಧಿಕ ಭಾಗ್ಯವೇನುಂಟು ?'' ಎಂದು ನೃತ್ಯವಿದ್ಯಾಧರನು ಅರಸನಿಗೆ ಸಾಷ್ಟಾಂಗನಮಾಡಿ, ಎದ್ದುನಿಂತನು.

ಆ ನೃತ್ಯವನ್ನು ಸಭೆಯೆಲ್ಲ ಮೆಚ್ಚಿ ಹೊಗಳಿತು..

ಆಗ ಅರಸನು, ನಟುವನಿಗೂ ಅವನ ಮೇಳದವರಿಗೂ ಅವರು ಹೊರುವಷ್ಟು ಮನ್ನಣೆಯನ್ನು ಕೊಟ್ಟನು. ನೇತ್ರಮೋಹಿನಿ ಚಿತ್ರಮೋಹಿನಿ ಯರಿಗೂ ಪವಿತ್ರವಾದ ಆಭರಣಗಳನ್ನು ನೀಡಿದನು. ಅವರು ಅವನ್ನು ತಮ್ಮ ಕಾಸೆಯ ಸೆರಗನ್ನೊಡ್ಡಿ ಸಂಗ್ರಹಿಸಿಕೊಂಡರು.

ತಾವು ಪಡೆದ ಆಭರಣಗಳ ರಾಶಿಯನ್ನು ತಮ್ಮ ಮನೆಯವರ ಕೈಗೆ ಒಪ್ಪಿಸಿ, ಆಯಿಬ್ಬರೂ ತಮಗೆ ಮನಸ್ಸಿನಲ್ಲಿ ಇನ್ನೂ ಏನೋ ಆಸೆಯಿರುವಂತೆ ಅಲ್ಲಿ ಅರಸನ ಎದುರಿಗೆ ನಿಂತರು.

೫

ನಾಟಕರಂಗದ ತೆರೆ ಮರೆಯಾಗಿ, ಅರಸನನ್ನು ಕಂಡಾಗಲೇ ಅವರಿಗೆ ಅರಸನ ಮೇಲೆ ಆಶೆ ಅಂಕುರಿಸಿತು. ಹೊತ್ತು ಕಳೆದಹಾಗೆಲ್ಲ, ಅದು ಬೆಳೆದು, ಅವರ ಮನಸ್ಸಿನ ತುಂಬಾ ಪರಿಪೂರ್ಣವಾಗಿ ಹಬ್ಬಿಕೊಂಡಿತು. ಒಮ್ಮೆ ಅರಸನನ್ನು ಕಂಡದ್ದಕ್ಕೇ ತಮ್ಮ ಎದೆ ಜುಮ್ಮೆಂದಿತು, ಪುನಃ ಪುನಃ ನೋಡಿ ದರೆ ಆಟವೇ ಮರೆದೀತು – ಎಂದು ಅವರು ರಾಯನ ಕಡೆಗೆ ನೇರವಾಗಿ ಕಣ್ಣಿಡದೆ, ಓರೆಮುಖದಿಂದ ನೋಡಿ, ಗೆದ್ದರು.

ಆಟದ ಚಿಂತೆಯಲ್ಲಿರುವ ವರೆಗೆ ಆಶೆ ಅಡಗಿತ್ತು. ಆಟ ಅಡಗಿ ದೊಡನೆ ಆಶೆ ತಲೆಯೆತ್ತಿತು. ಕೂಟಕ್ಕೆ ನೆನೆದರೆ, ಅದು ದೊರಕದು ಎಂದು ಕೋಟಲೆಪಡುತ್ತಿದ್ದರು. ಒಳಗಿನ ಕಾತರ 'ನೃಪತಿಯನ್ನು ಹಿಡಿ' ಎನ್ನು ತ್ತಿದೆ. 'ಹಿಡಿಯಹೋದೀಯೆ, ಜೋಕೆ!' ಎನ್ನುತ್ತಿದೆ ಎದೆ. 'ಸೋತೆ ನೆಂದು ಹೇಳು' ಎನ್ನುತ್ತಿದೆ ಇಚ್ಛೆ. 'ಸಭೆಯಲ್ಲಿ ಹೇಳಬಾರದು' ಎನುತ್ತಿದೆ ಭೀತಿ, ಎನ್ನುತ್ತಿದೆ ಲಜ್ಜೆ. 'ಸೂಳೆ ಕರೆಯಬಹುದು. ಚೆಲುವನನ್ನು ಕರೆ' ಎನ್ನುತ್ತಿದೆ ಅವರ ಜಾತಿಶೀಲ. 'ಈ ದೊರೆ ಪರಪತ್ನಿಯರನ್ನೂ ಸೂಳೆಯ ರನ್ನೂ ದಾಸಿಯರನ್ನೂ ಸೋಂಕನು' ಎಂದು ಜೋಕೆಕೊಡುತ್ತಿದೆ, ಮನಸ್ಸು. ಮನಸ್ಸು ಹೆಜ್ಜೆಹೆಜ್ಜೆಗೂ ಎಚ್ಚರಿಕೆ ಹೇಳುತ್ತಿದೆ, ತವಕ ಹೆಜ್ಜೆಹೆಜ್ಜೆಗೂ

ನಂಜಿನಂತೆ ಏರುತ್ತಿದೆ. ಅಷ್ಟು ಅಂಜಿಕೆಯಾದರೂ, ಅರಸನ ಮುಂದೆ ಸೋತು ನಿಂತಿದ್ದರು ಅವರು.

"ನೆಲದ ಮೇಲಿನ ಹುಲ್ಲೆ ಚಂದ್ರಮಂಡಲದ ಹುಲ್ಲೆಯನ್ನು ಕಾಮಿಸಿ ನಿಂತ ಹಾಗೆ, ನಮಗೆ ಈ ಭರತರಾಜನಲ್ಲಿ ಇಚ್ಛೆ ಆಯ್ತಲ್ಲಾ" ಎಂದು ಅವರು ಮನಸ್ಸಿನಲ್ಲೇ ಕೊರಗಿದರು.

ರಾಜನು ಅವರ ಎದೆಯ ಕಾತರವನ್ನು ತಿಳಿದನು. "ಈ ನೆರೆಯದವರಿಗೆ ನೆರೆದಂತೆ ಸುಖ ತೋರಿ, ಇವರ ಕೋಟಲೆಯನ್ನು ಪರಿಹರಿಸುವೆನು" ಎಂದುಕೊಂಡನು. ಅಂಗಜಾಗಮದಲ್ಲಿ ಸಿದ್ಧನಾದ ಅವನು "ಇವರಿಗೆ ಇದು ಇದು ಕಾಮೋದ್ರೇಕದ ಸ್ಥಾನಗಳು" ಎಂಬುದನ್ನು ಕಂಡುಕೊಂಡನು.

"ಇನ್ನು ನೀವು ತೆರಳಿ" ಎಂದ, ದಕ್ಷಿಣನಾಯಕ.

"ಅರಸನಿಗೆ ಅಡ್ಡಬಿದ್ದು ಹೊರಡಿ" ಎಂದ, ನೃತ್ಯವಿದ್ಯಾಧರ.

ಅರಸನಿಗೆ ಎರಗುವ ನೆಪದಿಂದ, ಅವನ ಪಾದಗಳನ್ನು ಮುಟ್ಟಿ, ಕಿರಿದು ಸುಖವನ್ನು ಕಾಣುವೆವೆಂದು, ಆ ಪಾತ್ರದ ಹೆಣ್ಣುಗಳು ಬಂದು, ಅರಸನ ಪಾದಗಳ ಬಳಿ ಕುಕ್ಕುರಿಸಿದರು.

ಕಣ್ಣು ಕತ್ತಲೆಬಂತು, ಅವರಿಗೆ. ಮೈ ಕಂಪಿಸಿತು, ಅವರಿಗೆ. ಅವರು ಅವನ ಪಾದಗಳನ್ನು ಹಿಡಿದಾಗ – ಅವರ ಕೈ ಬೆಚ್ಚಗಿದ್ದುವು, ಆತನ ಕಾಲುಗಳು ತಂಪಗೆ ಇದ್ದುವು.

ಅಂಗಜಾಗಮಸಿದ್ಧನು ಒಂದು ಉಂಗುಷ್ಟದಿಂದ ಒಬ್ಬಳ ಕೆನ್ನೆಯನ್ನು, ಇನ್ನೊಂದು ಉಂಗುಷ್ಟದಿಂದ ಒಬ್ಬಳ ಮೊಲೆಯನ್ನು ಒತ್ತಿದನು. ಆ ಕೂಡಲೆ ಅವರು ಮೂರ್ಛಾಂಗಕ್ಕೆ ಸಂದರು.

ಕೂಡಲೆ, ರಸಿಕನಾದ ದಕ್ಷಿಣನಾಯಕನು ಅವರ ಮೇಲೆ ಒಂದು ವಲ್ಲಿಯ ಮುಸುಕನ್ನು ಇರಿಸುತ್ತ, "ಎಲ್ಲಿ! ಹೊಸ ಮದ್ದಳೆಯ ಶಬ್ದ ಮತ್ತೊಮ್ಮೆ ಕೇಳಿಬರಲಿ!" ಎಂದು ಅಲ್ಲಿನ ರಸಭಂಗವನ್ನು ಮರೆಮಾಡಿದನು.

ಮದ್ದಳೆಕಾರನು "ತತ್ತತ್ತೈ! ತಿತ್ತಿತಿ!" ಎಂದು ಅತ್ತ ಗಲಭೆಮಾಡುತ್ತಿದ್ದರೆ, ಇತ್ತ ಆ ಗಣಿಕೆಯರು ತಾವು ಅರಸನೊಡನೆ ನೆರೆದಂತೆ ಸುಖಮಗ್ನೆಯರಾಗಿದ್ದರು. ಸಾರ್ವಭೌಮನ ರೂಪ ಅವರ ಎದೆಯಲ್ಲಿ ಪ್ರತ್ಯಕ್ಷವಾಗಿ ತುಂಬಿತ್ತು. ಹೊರಗಿನ ಜಾಣರನ್ನು ಮರುಳುಮಾಡುವ ಆ ನೇತ್ರಮೋಹಿನಿ

ಚಿತ್ರಮೋಹಿನಿಯರು ತಾವೇ ತಮ್ಮೊಳಗಿನ ಅರಸನಿಗೆ ಮರುಳಾಗಿ ಹೋಗಿದ್ದರು.

ರಾಜನು ಮಾತ್ರ "ಇವರು ನನ್ನನ್ನು ಆಶಿಸಿ, ಪಾಪ, ದಣಿದರು. ನಾನಾದರೋ ಇವರನ್ನು ಆಶಿಸಿ ಮುಟ್ಟಿದವನಲ್ಲ. ಹಸಿಯ ಚರ್ಮದ ಚರ್ಮಾವುಗೆಗಳನ್ನು ಮೆಟ್ಟಿದ ಹಾಗೆ ಇದು!" ಎಂದು ಎಣಿಸಿದನು.

ಸ್ವಲ್ಪಹೊತ್ತಿನಲ್ಲೆ ಮೂರ್ಛೆ ತಿಳಿದು, ಅವರು ಎದ್ದರು. "ನಿಲ್ಲು, ಹೋ! ಮದ್ದಳೆ ಸಾಕು!" ಎಂದು ದಕ್ಷಿಣಾಂಕನು ಅವನನ್ನು ನಿಲ್ಲಿಸಿದನು.

ದಕ್ಷಿಣಾಂಕನ ತಂತ್ರವನ್ನು ಅಲ್ಲಿದ್ದವರು ಕೆಲವರು ತಿಳಿದರು. ತಿಳಿದರೆ ತಾನೆ ಏನು, ಅದನ್ನು ಕುರಿತು ಆಡಲುಂಟೆ? ಅದು ಬಲ್ಲಚಕ್ರವರ್ತಿಯ ಸಭೆ! ಆಸ್ಥಾನ ಮೌನವಾಗಿ ತೊಲಗಿತು.

"ಬುದ್ಧಿಸಾಗರ ಒಬ್ಬ ಇರಲಿ" ಎಂದು ಅರಸನು, ಉಳಿದ ಸಮೃದ್ಧ ಸಭಾಜನಗಳಿಗೆ ಪದ್ಧತಿಯ ಪ್ರಕಾರ ಉಡುಗೊರೆ ಕೊಟ್ಟು ಕಳುಹಿಸಿದನು.

ಎಲ್ಲರೂ ತೆರಳಿದ ಮೇಲೆ, ಪರಿಚಾರಿಣಿಯರು ನಾಟ್ಯಗೃಹವನ್ನು ತೊಳೆದು, ಚೆಲುವಾಗಿ ಶೃಂಗಾರಮಾಡಿದರು.

"ನೃಪನ ಅರಮನೆಯ ಪಾತ್ರದವರನ್ನು ಬರಹೇಳು" ಎಂದು ಅಪ್ಪಣೆಯಾಯಿತು.

ನೀಟಾದ ತೆರೆಯಲ್ಲಿ ರಾಜನ ಸತಿಯರು. ಎದುರಿಗೆ ಮಂತ್ರಿ. ಎದ್ದ ಗದ್ದುಗೆಯಲ್ಲಿ ರಾಜ.

ಅರಮನೆಯ ನಾಟಕಸತಿಯರು ಬರುತ್ತಿದ್ದರು.

# ಭಾಗ ಐದು : ರೂಪಾಣಿ, ಪದ್ಮಿನಿ

೧

"ಪೂರ್ವ ನಾಟಕ ಆಯಿತು. ಇನ್ನು ಉತ್ತರ ನಾಟಕದ ಅಪೂರ್ವ ಕಾಂಗವನ್ನು ನರ್ತಿಸಿ ತೋರಿಸೋಣ" ಎಂದು ಅರಮನೆಯ ನಾಟ್ಯ ಸತಿಯರು ಬರುತ್ತಿದ್ದರು. ಅವಯವಕ್ಕೆ ಅಳವಟ್ಟ ಶೃಂಗಾರದಿಂದ ಆ ಸೀರೆಯರು ಅವನಿಪತಿಯ ಕಣ್ಣಿಗೆ ಕಾಣಿಸಿಕೊಳ್ಳದೆ ತೆರೆಯ ಒಳಕ್ಕೆ ಹೋಗುತ್ತಿದ್ದರು.

ಕಂಕಣಗಳ ಕಣಕಣಧ್ವನಿ. ಕಟಿಸೂತ್ರಗಳ ಕಿಂಕಿಣಿ ಕಿಣಿಮಿಣಿ. ಕಾಲಿನ ಅಂದುಗೆಗಳ ಝೇಂಕಾರದ ಝಣಝಣ. ಹೊನ್ನಿನ ಗೆಜ್ಜೆಗಳ ಝಲ್ಲುಝಲ್ಲು. ಮೆಲ್ಲಮೆಲ್ಲನೆ ತಾವು ತಮ್ಮಲ್ಲೆ ಕಿರುದನಿಯಲ್ಲಿ ಮಾತ ನಾಡುತ್ತ, ನಗುತ್ತ, ಉಲ್ಲಾಸದಿಂದ ಬರುತ್ತಿದ್ದರು.

ಅವರ ಮೀನಲುಕಂಪಿನ ಗಾಳಿ ಸುವಾಸನೆಯಿಂದ ನಾಟ್ಯವಾಸವನ್ನೆಲ್ಲ ತುಂಬಿತು.

ಪರದೆಯ ಮರೆಯಲ್ಲಿ ನಿಂತು, ಪಕ್ಕದ ಒಂದು ಕಂಡಿಯಲ್ಲಿ ಇಣಿಕಿ ನೋಡಿದರು. ರೋಮಾಂಚದ ಹಿಂಡನ್ನು ಏಳಿಸುವಂತೆ ಗಂಡನು ಗದ್ದುಗೆ ಯಲ್ಲಿ ಇದ್ದುದನ್ನು ಕಂಡರು.

ಗದ್ದುಗೆಯಲ್ಲಿ ಒಂದು ಚಿನ್ನದ ಪುತ್ತಳಿಯನ್ನು ತಿದ್ದಿ ಶೃಂಗಾರಮಾಡಿ, ಅದಕ್ಕೆ ಇದ್ದಂತೆ ಪ್ರಾಣ ಬಂದು ಕಾಣುವುದೊ ಎಂಬಂತೆ ಆ ಚೆಲುವರ ದೇವನಿದ್ದನು. ಒಳ್ಳೇ ತೋರವಾದ ದೇಹ, ನರೆತ ಗಡ್ಡ, ಕಿವಿಯ ಕುಂಡಲ, ಕೈಯ ಕಂಕಣ, ಎದೆಯ ಹಾರ — ಮಂತ್ರಿ ಮುಂದೆ ಇದ್ದ.

"ಗದ್ದುಗೆಯಲ್ಲಿ ಸ್ವಾಮಿಯಿದ್ದಾನೆ. ಮುಂದೆ ಮಾತ್ರ ಮಂತ್ರಿ ಇದ್ದಾನೆ. ಮತ್ತೆ ಯಾರೂ ಹತ್ತಿರಿಲ್ಲ ಉಳಿದವರು ಊಳಿಗದ ಹೆಣ್ಣುಗಳು" ಎಂದು ತಮ್ಮತಮ್ಮಲ್ಲೆ ಮಾತಾಡಿಕೊಂಡರು.

"ಈ ಮಂತ್ರಿ ಜಾಣ. ಈ ರಾಯ ಜಾಣ. ಈ ಇಬ್ಬರಿಗೆ ರುಚಿ ತೋರುವಂತೆ ನಾವು ಇಂದು ರಚನೆ ಕಾಣಿಸಬೇಕು, ನೃತ್ಯದಲ್ಲಿ" ಎಂದು ಮಾತನಾಡಿಕೊಂಡರು.

ಮೆರೆಯುವ ಚಂದ್ರಬಿಂಬದೊಳಗೆ ಅಡಗಿದ ಹದಿನಾರು ಕಲೆಗಳೋ ಎಂಬ ಹಾಗೆ, ಆ ಹದಿನಾರು ಪಾತ್ರಗಳು ಮುತ್ತಿನ ತೆರೆಯ ಮರೆಯಲ್ಲಿ ಎಡೆಯೊಡ್ಡಿ ನಿಂತರು.

೨

ತೆರೆಯ ಮುಂದುಗಡೆ ಮದ್ದಳೆಗನು ನಿಂತು, ಭರತಚಕ್ರಿಗೆ ಕೈಮುಗಿದು, "ವರಿಕಟ ತದಿಕಟ ರಿಕ್ಕರಿಕ್ಕಟ ದಿಮಿ ದಿರುದಿಮಿಕು" ಎಂದು ಕೇಳಿಸಿದನು. ತಾಳಧಾರಿ ಕಾಲವನ್ನು ಅರಿತು, ಕಟ್ಟಣೆಯನ್ನು ತಿಳಿದು, ಮೇಲೆ ಕೆಳಗೆ ಜಾರದೆ ಲಯತಾಳಗತಿಯನ್ನು ಕೇಳಿಸಿದನು, "ಠೀವಿಠೀವಿಳಿ ಜೆಜೆಜೆಂಜೆ ಝಿಂಝಿಂ ಮಿರುಕು ಚಾವುಚಾವುಲು ಜುಮ್ಮುಜುಮ್ಮು" ಎಂದು ಆವುಜಕಾರ ಕೇಳಿಸಿದ. ಇತರ ವಾದ್ಯಗಳೂ "ಜೆಂಜೆಕು ತಕದಿಕ ತೋದಿಗಿ ದಿಮಿಕು" ಎಂದು ಜತೆಕೂಡಿದುವು.

ಪಾತ್ರದ ಭಾವಕಿಯರ ಹಜ್ಜೆ ನಲಿಯಿತು.

ಆಗ, ಅಂಗೈಯನ್ನೆತ್ತಿ ಸಂಜ್ಞೆಮಾಡಿ, ವಾದ್ಯರವಗಳನ್ನು ಜೋಕೆಯಿಂದ ನಿಲ್ಲಿಸಿ, ರಂಗಶೇಖರನೆಂಬ ನಯಕಾರನು ಅಂಗಜರೂಪನ ಎದುರಿಗೆ ಬಂದನು. ಆ ನಾಟ್ಯಾಂಗವನ್ನು ಬರೆದ ಕವಿಯೂ ಅವನೆ, ಅದನ್ನು ಆ ಪ್ರಿಯೆಯರಿಗೆ ಕಲಿಸಿದವನೂ ಅವನೆ. ಅವನು ಉಭಯಕರ, ಎರಡು ವಿದ್ಯೆ ಬಲ್ಲವ. ಬ್ರಾಹ್ಮಣ. ಗಡ್ಡ, ಕಿವಿಯ ಕುಂಡಲ, ಧೋತ್ರ, ನಡುಸುತ್ತಿದ ವಸ್ತ್ರ, ದೊಡ್ಡ ಮುಂಡಾಸು, ಚಂದನದ ಅಡ್ಡಬೊಟ್ಟು, ಅಪರಂಜಿಯ ಸೆಳೆಬೆತ್ತ. ಬಂದು ರಾಜನಿಗೆ ಅಡ್ಡಬಿದ್ದನು.

"ಸಕಲಕಲಾಧರ! ಸಾರ್ವಭೌಮೋತ್ತಮ! ಬಿನ್ನಹ! ನಾನು ಒಂದೂ ಅರಿತವನಲ್ಲ. ಸುರಲೋಕದಿಂದ ನಿನ್ನನ್ನೇ ನೋಡಬೇಕೆಂದು ಸುರಸುದತಿಯರು ಬಂದ ಹಾಗೆ ನಿನ್ನ ಸತಿಯರು, ಬಂದು ನಿಂತಿದ್ದಾರೆ. ಹದಿನಾರ ನೆಯ ಮನುವೆ, ಹದಿನಾರು ಮನುಗಳ ಸಂಪತ್ತೆಲ್ಲವೂ ತುಂಬಿ ಒಂದುಗೂಡಿ ನಿಂತೆ

ಹಾಗೆ, ಹದಿನಾರು ಪಾತ್ರಗಳು ಇದ್ದಾವೆ. ನೀನು ಇಂದ್ರ, ನಿನ್ನ ಮಂತ್ರಿಯೋ ದೇವಗುರುವಾದ ಬೃಹಸ್ಪತಿ, ನಿನ್ನ ನಾರಿಯರು ದೇವ ಲೋಕದವರು — ಈ ಇವರ ನಾಟ್ಯ ನಿಮಗೆ ಮೋಹವುಂಟುಮಾಡುವುದನ್ನು ನಾನು ನೋಡುತ್ತೇನೆ"— ಎಂದು ರಂಗಶೇಖರನು ಕೈಮುಗಿದು ಹೋದನು.

ಹೀಗೆ ರಂಗಶೇಖರನು ತೆರೆಯ ಎದುರಲ್ಲಿ ನಿಂತು ನೃತ್ಯದ ಗೆರೆಯನ್ನು ಸೂಚಿಸಲು, ಹೆಂಗುರಳ ದನಿಯಿಂದ ರಾಗ ಶಾಖೋಪಶಾಖೆಯಾಗಿ ಕಿವಿಗೆ ಕಾಣಿಸಿಕೊಂಡಿತು. ಶಿಖರಿಣಿ ಸಿಂಜಿನಿ ಎಂಬ ಇಬ್ಬರು ಗಾಯಕಿಯರು ನಿಂತು, ತಿತ್ತಿ ಮುಖವೀಣೆಗಳನ್ನು ಶ್ರುತಿಕೂಡಿಸಿ, ಮೇಳ ತಪ್ಪದೆ ಆಲಾಪ ಮಾಡಿದರು. ನವಳನವಳವಾಗಿ, ಸಪುರಸಪುರವಾಗಿ, ತರಳತರಳವಾಗಿ ತೋರಿ, ಕೊರಳಿನಲ್ಲೂ ಬೆರಳಿನ ಸರಿತದಲ್ಲೂ ವಿರಳವಿರಳವಾಗಿ ಸ್ಥಾಯಿಯನ್ನು ಕಾಣಿಸಿದರು. ಮಂಜುಳವಾದ ತೆಳುಬಟ್ಟೆಯನ್ನು ಸೀಳಿದ ಹಾಗೆ, ಅಪರಂಜಿ ಯಲ್ಲಿ ನರಿಗೆ ತೆಗೆದ ಹಾಗೆ, ಕಮಲದ ಕಂಪನ್ನು ಉಂಡು ಎದ್ದೇಳುವ ದುಂಬಿಯ ಗಾನರಂಜನೆಯ ಹಾಗೆ ರಾಗ ತೋರಿದರು. ರಾಗವನ್ನು ಅಳೆಯುವ ಹಾಗೆ, ಜಾಡ್ಯವನ್ನು ತುಳಿಯುವ ಹಾಗೆ, ಮೋಹನರಸವನ್ನು ಹಿಂಡಿ ಹಿಳಿಯುವ ಹಾಗೆ, ಮನಸ್ಸನ್ನು ತೊಳೆಯುವ ಹಾಗೆ, ಸಂಜೀವನದ ಅಮೃತವನ್ನು ತಳಿಯುವ ಹಾಗೆ — ರಾಗವನ್ನು ತೋರಿದರು. ರಾಗವನ್ನು ಸ್ವರ್ಗಲೋಕಕ್ಕೆ ಹಬ್ಬಿಸುವಂತೆ, ರೋಮಾಂಚಗಳನ್ನು ಎಬ್ಬಿಸುವಂತೆ, ಕಬ್ಬಿನ ಬಿಲ್ಲಿನ ಹೆದೆಯನ್ನು ಮೀಟಿದ ಹಾಗೆ ಒಬ್ಬೊಬ್ಬರೂ ಇಂಪನ್ನು ಹೊಮ್ಮಿಸುತ್ತ ಹಾಡಿದರು. ಉಚ್ಚದಲ್ಲಿ ಎತ್ತುವರು, ಅಡಕದಲ್ಲಿ ಇಳಿಸುವರು, ಒಡನೆ ಮತ್ತೆ ಉಚ್ಚದಲ್ಲಿ ಎತ್ತುವರು ; ಸಂಚುವಂಚನೆಯಿಂದ, ಸರಸವಾಗಿ, ಮಿಂಚುಮಿಂಚುಗಳು ಫಳ್ಳೆಂದ ಹಾಗೆ, ಅಮೃತವನ್ನು ಹಂಚುವ ಹಾಗೆ ಹಾಡಿದರು. ಇಂಪಾದ ಸ್ವರವು ಅತ್ತಿತ್ತ ಜಾರದ ಹಾಗೆ, ರಾಗದ ಮಿಂಚು ಮಾಸದ ಹಾಗೆ, ಕೇಳಿದವರ ಪಾತಕ ಹರಿಹಂಚಾಗಿ ಹರಿದುಹೋಗುವಂತೆ ಆ ಸೊಬಗಿಯರು ಪಂಚಗುರುಗಳನ್ನು ಕುರಿತು ಹಾಡಿದರು. "ಜಂಜಡವಿಲ್ಲದ ಸುವಸ್ತುವೇ, ನಮೋಸ್ತು ! ಕರ್ಮವನ್ನು ಕಳೆಯುವ ಅಂಜನವೇ, ಜಯತ್ತು ಜಯ !" ಎಂದು ಸಿಂಜಿನಿ ಶಿಖರಿಣಿಯರು ನಿರಂಜನಸಿದ್ಧನನ್ನು ಹಾಡಿ ಹೊಗಳಿದರು.

೩

ಅತ್ತ, ಲಯವಾದ್ಯಗಾನಗಳಿಗೆ ಹೊಂದಿಕೊಂಡು ನಾಟ್ಯದ ರಂಜನೆಯನ್ನು ಕಾಣಿಸುವ ಉಭಯಕಾರರ ಅನುಮತದಿಂದ ತೆರೆಯೊಳಗೆ ಪಾತ್ರದ ಮೃಗನೇತ್ರೆಯರು ಅನುವಾದರು. ಹದಿನಾರು ಪಾತ್ರಗಳೂ ಒಂದೇ ಸಾಲಾಗಿ, "ಇದೆ ಇದೆ ಈಗಲೋ ಆಗಲೋ ಅರಸನನ್ನು ನೋಡುವೆವು" ಎಂಬ ಸಂಭ್ರಮದಿಂದ ತೆರೆಯ ಹಿಂದೆ ನಿಂತಿದ್ದರು.

ಎತ್ತಿದ್ದ ತೆರೆಯನ್ನು ಕೊರಳುತನಕ ಮೆಲ್ಲನೆ ಒತ್ತಿ ತಗ್ಗಿಸಿ ಕಾಣಿಸಿದರು; ಕಾಂತಿಗೊಂಡ ದುಂಡುಕನ್ನಡಿಯ ಸಾಲಿನಂತೆ ಆ ಕಾಂತೆಯರ ಮುಖಪಂಕ್ತಿ ರಾಜಿಸಿತು. ಹಾಲುಕಡಲಿನಿಂದ ಮೇಲೆ ಏಳುವ ಚಂದ್ರರ ಸಾಲೋ, ಪದ್ಮಗಳ ಸಾಲೋ ಎಂಬಂತೆ — ಎಳೆಮುತ್ತಿನಿಂದ ಜಡಗಾದ ತೆರೆಯ ಮೇಲುಭಾಗದಲ್ಲಿ ಆ ಹೆಣ್ಣುಗಳ ಮುಖಗಳು ಕಂಗೊಳಿಸಿದುವು.

ಬಳಿಕ ತೆರೆಯನ್ನು ನಡುವರೆಯಂತ ಕುಸಿಯಿಸಿದರೆ — ನಳನಳಿಸುವ ತೋಳುಗಳೂ ಮೊಲೆಗಟ್ಟಿನ ಮೊಲೆಗಳ ಸಾಲೂ ಮೋಹವನ್ನುಂಟುಮಾಡಿತು. ಅನರ್ಘವಾದ ಸಮ್ಮೋಹನಮುದ್ರಕ್ಕೆ ಚಿನ್ನದ ಬೆಟ್ಟಗಳನ್ನು ಒಟ್ಟಿ ಸೇತುವೆ ಕಟ್ಟಿದಹಾಗೆ ವೃತ್ತಾಕಾರದ ಮೊಲೆಗಳ ಸಾಲು ಮೊಲೆಗಟ್ಟಿನ ಮರೆಯಲ್ಲಿ ಮೆರೆಯಿತು.

ನಡುಸುಟ್ಟ ತೆರೆಯಿಳಿಸಿದಾಗ ಆ ಲಲನೆಯರು ತೋಳುಗಳನ್ನೆತ್ತಿ, ಕಡೆಗಣ್ಣಿನಿಂದ ಅರಸನನ್ನು ನೋಡಿ, ಕಾಮನು ಹೂಬಾಣಗಳನ್ನು ಕೆದರಿದ ಹಾಗೆ ಬೆಡಗಿನಿಂದ ಪುಷ್ಪಾಂಜಲಿಯನ್ನು ಎರಚಿದರು. ಅವರ ಕೈಯ ಹೂಗಳು ಎದುರಿಗಿದ್ದ ಯಂತ್ರದ ದಾರವನ್ನು ತಾಕಲು, ಅರಸನಿಗೂ ಅರಸನ ಹಿಂದಿನ ಆದಿಜಿನನ ವಿಗ್ರಹಕ್ಕೂ ಒಯ್ಯಾರದಿಂದ ಹೂಮಳೆಯಾಯಿತು. ತಟಕ್ಕನೆ, ಅದೇ ಗಳಿಗೆ, ಆಕಾಶದಿಂದ ರತ್ನಪುಷ್ಪದ ಮೂರು ಪೊಟ್ಟಣ ಹರಿದುಹೋದ ಹಾಗೆ ದೊಡ್ಡ ಹೂಮಳೆಯಾಯಿತು.

ಒಡನೆ ತೆರೆಯನ್ನು ಮೇಲೆತ್ತಿದರು. ರಮಣಿಯರ ರೂಪ ಮರೆಯಾಯ್ತು. ಗಾಯಕರು ಉಚ್ಚದಲ್ಲಿ ಎತ್ತಿ ಹಾಡಿದರು.

ಉದ್ದಕ್ಕೆ ಹರಡಿದ್ದ ತೆರೆ ತೊಲಗಿತು. ಮತ್ತೆ ಹದಿನಾರು ಪಾತ್ರ ಕಣ್ಣಿಗೆದುರಾಯಿತು. ಹಿಮ್ಮಡಿ ಹಿಮ್ಮಡಿ ಎದುರಾಗಿ, ತೊಡೆ ಕಾಸೆ ಪಸರಿಸಿ,

ಹಸ್ತಗಳನ್ನು ನಡುವಿನಲ್ಲಿಟ್ಟು, ಮೈಯನ್ನು ಕೊಂಚ ಕೊಂಕಿಸಿ, ಕಣ್ಣಿಗೆ ಸವಿಯನ್ನು ಸಾಲಿಟ್ಟು ತೋರಿದರು. ಪಂಚರತ್ನದ ಕಾಸೆ, ನವರತ್ನದ ಭೂಷಣ, ಮಿಂಚುವ ಮುತ್ತಿನ ಮೊಲೆಕಟ್ಟು — ಇವುಗಳನ್ನು ಹೊಂಚಿ, ರತ್ನದಲ್ಲಿ ನಿರ್ಮಿಸಿದ ಪುತ್ಥಳಿಗಳೋ ಎಂಬಂತೆ ಇದ್ದರು. ಎಣ್ಣೆಕಪ್ಪಿನ ಮೈಗೆ, ಕರಿದಾದ ಮೈಗೆ, ಹೊಂಬಣ್ಣದ ಮೈಗೆ ಒಪ್ಪುವಂಥ ಸಣ್ಣ ಬಣ್ಣದ ಕಾಸೆ, ಮೊಲೆಗಟ್ಟುಗಳು ಹಲವು ಬಣ್ಣದಲ್ಲಿ ಹೊಳೆದುವು. ಹಳದಿ ಬಿಳಿದು ಕೆಂಪು ಕರಿದು ಪಚ್ಚೆ ಎಂಬ ಬೇರೆಬೇರೆ ಬಣ್ಣದ ಬಟ್ಟೆಗಳಲ್ಲಿ ಅವರವರ ದೇಹಕ್ಕೆ ಒಪ್ಪುವಂಥ ಮೊಲೆಗಟ್ಟು ಕಾಸೆ ಚಲ್ಲಣ ಕಾಲುಕುಪ್ಪಸ ಇವು ಹೊಂದಿ ಮೆರೆದುವು. ಮುತ್ತಿನ ಬೊಟ್ಟು, ಮುತ್ತಿನ ಸರ, ತುರುಬಿನ ಮುತ್ತಿನ ಬಲೆ, ಮುತ್ತಿನ ಓಲೆ, ಮುತ್ತಿನ ಮೂಗುತಿ ಇವುಗಳಿಂದ ಆ ಮುಖಗಳು ತಾರೆ ಮುತ್ತಿದ ಬಹುಚಂದ್ರರಂತೆ ಇದ್ದುವು. ನೀಲ ಮುತ್ತು ಪುಷ್ಯರಾಗ ಮಾಣಿಕ್ಯ ಪಚ್ಚೆಗಳನ್ನು ಕೀಲಿಸಿದ ಕಾಸೆಗಳನ್ನು ಧರಿಸಿದ ಆ ಲೋಲಾಕ್ಷಿಯರಿಗದು ಕಾಮನ ಬಿಲ್ಲಿನ ದೊಡ್ಡ ಬಳ್ಳಿ ಹಬ್ಬಿಸಿದಹಾಗಿತ್ತು.

ಹಿಂದುಗಡೆ ಬೀಸುವ ಸಿಡಿದಾದ ಚಾಮರ. ಎಡಗಡೆ ಬಲಗಡೆ — ಹೊನ್ನಿನ ಕೊರಳಿನ ಇಂಪಾದ ಗಾನ. ನಡುವೆ ಸಾಲಾಗಿ ತ್ರಿಭಂಗಿಯಲ್ಲಿ ನಿಂತ ಹದಿನಾರು ಪಾತ್ರದ ವಸಿತೆಯರು.

ನಡುವಿನಲ್ಲಿ ಇಟ್ಟ ಹಸ್ತವನ್ನು ತೆಗೆದು ಮೆಲ್ಲನೆ ಒತ್ತಾದ ಮೊಲೆಗಳ ಬಳಿಗೆ ತಂದರು; ಚಿನ್ನದ ಕಳಶಕ್ಕೆ ಕೆಂಪಿನ ಚಿಗುರನ್ನು ಮೇಲಿಟ್ಟ ಹಾಗಾಯಿತೆಂದು ರಾಜ ಮೆಚ್ಚಿದ. ಮೊಲೆಯ ಮೇಲಿನ ಕೈಯನ್ನು ತೆಗೆದು, ಬೆರಳುಗಳನ್ನು ಎಡಕ್ಕೂ ಬಲಕ್ಕೂ ಚಿಮ್ಮಿಸಿದರು; ಅಕ್ಕಪಕ್ಕದಲ್ಲಿದ್ದ ಪ್ರತಿಮೆಗಳಿಗೆ ಜೀವಕಳೆಯನ್ನು ಚಿಮ್ಮಿಸಿದರೋ ಎಂಬ ಹಾಗೆ. ಕಾಲನ್ನು ಕದಲಿಸಿ ಮೆಲ್ಲನೆ ಒಲೆದಾಡಿ ನಡೆದರು—ತಂಗಾಳಿಗೆ ಬಳುಕುವ ಬಳ್ಳಿಗಳಂತೆ. ಸಾಲುಗೊಂಡದ್ದನ್ನು ಬಿಟ್ಟು ಮಂಡಲಾಕಾರವಾಗಿ ಹರಿದರು — ಕಬ್ಬಿನ ಬಿಲ್ಲನ್ನು ಬಾಗಿಸಿದ ಮನ್ಮಥನ ಚಕ್ರದಂತೆ. ಸುಳಿ ಕೆಡದ ಹಾಗೆ ಮತ್ತೆ ಒಂದು ಸಾಲಾದರು.

ಅವರಲ್ಲಿ ಹದಿನೈದು ಪಾತ್ರ ಗಳಿಲನೆ ಹಿಂದಕ್ಕೆ ಹೋಯಿತು. ಒಂದು ಪಾತ್ರ ಮಾತ್ರ ಮುಂದೆ ಉಳಿಯಿತು.

೪

ಮಂಗಲವತಿ ಎಂಬ ಪಾತ್ರದ ಸ್ತ್ರೀ ನಾಟ್ಯರಂಗದಲ್ಲಿ ಒಲೆದಾಡಿ, ರಾಜನ ಕಣ್ಣುಗಳಿಗೆ ಇಚ್ಛೆಯಾಗುವಂತೆ ನರ್ತಿಸುತ್ತಿದ್ದಳು.

ಒಮ್ಮೆ ಗಾನವನ್ನು ಕೇಳುತ್ತ ನಿಲ್ಲುವಳು — ಧ್ಯಾನಕ್ಕೆ ನಿಲ್ಲುವ ಯೋಗಿಯನ್ನು ಜ್ಞಾಪಕಕ್ಕೆ ತರುತ್ತ. ಇನ್ನೊಮ್ಮೆ ಚಳಚಳನೆ ಎಡಬಲಕ್ಕೆ ಸುಳಿಯುವಳು — ಮಾರನ ಮೆಚ್ಚಿನ ಖಡ್ಗವನ್ನು ಝಳಪಿಸುವಂತೆ.

"ಮಾನವನ ಭಾಗ್ಯ ಇಷ್ಟೆ! ಒಂದೇ ಮಾಸ!" ಎಂದು ತೋರಿಸುವಂತೆ ತನ್ನ ಭುಜಗಳನ್ನು ನೀಡುವಳು. "ಅರಸನನ್ನು ಕಂಡರೆ ಕಣ್ಣು ಹೀಗೆ ತೊಳಲಿಬರುವುದು!" ಎಂಬುದನ್ನು ತೋರಿಸುವಂತೆ ಮತ್ತೆ ಮತ್ತೆ ಸುತ್ತುವಳು.

ಊರ್ಧ್ವಲೋಕಕ್ಕೆ ಹೋಗುವಂತೆ ಮೇಲೆ ನೆಗೆಯುವಳು; ದೇವಲೋಕದವಳು ಬರುವಂತೆ ಕೆಳಗಿಳಿಯುವಳು. ಮುಗುಡವನ್ನು ಸೊಪ್ಪು ಸೊಪ್ಪನೆ ತುಳಿಯುವ ಹಾಗೆ ದೊಪ್ಪುದೊಪ್ಪನೆ ಹಜ್ಜೆಯಿಡುವಳು.

ನೋಡುವ ಕಣ್ಣಿನ ಬರವೆಲ್ಲ ಇಂಗಿಹೋಗುವಂತೆ ಕಿರುನಗೆಯಿಂದ ಕೂಡಿದ ಮುಖವನ್ನು ರಾಯನತ್ತ ತಿರುಹುವಳು. ಗದಗದಿಸುವ ಮೊಲೆ, ಗಡಗಡಿಸುವ ತೊಡೆ, ಬೆಳಕನ್ನು ಕೆದರುವ ಕಡೆಗಣ್ಣು, ಮದನಾನುರಾಗವನ್ನು ಸೂಸುವ ಮುಖ — ಆ ಮದದ ಹೆಣ್ಣು ನಾಟ್ಯವಾಡಿದಳು.

ಮುಖದಲ್ಲಿ ಹಾವ, ಮನಸ್ಸಿನಲ್ಲಿ ಭಾವ, ಹುಬ್ಬುಗಳಲ್ಲಿ ವಿಭ್ರಮ, ಬಗಸೆಗಣ್ಣುಗಳಲ್ಲಿ ವಿಲಾಸ — ರಸ ಉಕ್ಕುವಂತೆ ಮಂಗಲವತಿ ನಾಟ್ಯ ತೋರಿದಳು.

ತಾಳ ಡಾಡೆ ಆವುಜ ಮದ್ದಳೆ ಚಿನುಚಂಪೆ ಇವುಗಳ ಘುಳುಘುಳು ಧ್ವನಿಗೆ ಹೊಂದಿ ಅವಳು ಕುಣಿದಳು — ಗುಡುಗಿನ ಧ್ವನಿ ಕೇಳಿ ಸೋಗೆ ನವಿಲು ಕುಣಿಯುವಂತೆ. ಕಿನ್ನರಿ ದಂಡಿಗೆ ತಿತ್ತಿ ಕೊಳಲು ಇವುಗಳ ಬೇರೆ ಬೇರೆ ಗಾನರಸಕ್ಕೆ ತಕ್ಕಂತೆ ಆಡಿದಳು — ನಾಗಸ್ವರಕ್ಕೆ ನರ್ತಿಸುವ ನಾಗಕನ್ನಿಕೆಯ ಹಾಗೆ.

ನಡೆದಾಡುವ ಬಳ್ಳಿಯೋ ಎಂಬಂತೆ ನಾನಾರೀತಿಯ ನಾಟ್ಯಾಂಗದ ನಟನೆ ತೋರಿ, ಮುಂದುಗಡೆಗೆ ಬಂದು, ಹಿಂದುಗಡೆಗೆ ಹೋಗಿ, ಮಂಗಲ ವತಿ ಮರೆಯಾದಳು.

ಬಳಿಕ ಪದ್ಮಿನಿ ಎಂಬವಳು ಬಂದಳು; ಆಡಿ, ಹಿಂದಕ್ಕೆ ಹೋದಳು. ಮತ್ತೆ, ಚಂದನವತಿ ಬಂದು ಆಡಿಹೋದಳು. ಕುರುವಿಂದಾಸಿ ಬಂದು ನಟಿಸಿ ನಡೆದಳು. ಮಕರಾಣಿ, ಚೂಡಾಣಿ, ಹಂಸಿಸಿ, ಮಿಂಚಿಸಿ, ಮುಕುರಾಣಿ, ರೂಪಾಣಿ ಎಂಬ ಕೋಕಿಲಕಂಠಿಯರು ಒಬ್ಬೊಬ್ಬರೂ ಬಂದು, ಆಡಿ, ಹಿಂದಕ್ಕೆ ಸರಿದರು. ಚಂದ್ರಾಣಿ, ಪುಷ್ಪಾಣಿ, ಸುಪ್ಪಾಣಿ, ಕಟ್ಟಾಣಿ, ಮಂದ್ರಾಣಿ, ಮಧುರಾಣಿ ಎಂಬ ಚಂದ್ರನ ಹದಿನಾರು ಕಲೆಗಳಂಥ ಹೆಣ್ಣುಗಳು ಬಂದು, ಇಂದ್ರಸಮಾನನಾದ ಅರಸನ ಎದುರಿಗೆ ಆಡಿದರು.

ಒಬ್ಬೊಬ್ಬರಾಗಿ ಬಂದು, ಒನ್ನೊನ್ನ್ಮೆ ತಾವೆಲ್ಲ ಉಬ್ಬಿಂದ ನಟನೆ ಮಾಡಿದರಾದರೂ, ಒಬ್ಬಳು ಕೊಂಡದ್ದನ್ನು ಒಬ್ಬಳು ಬೆರಸದೆ, ಅಪೂರ್ವದ ನಾಟಕವನ್ನು ಆಡಿ ತೋರಿದರು.

೫

ಅನಂತರ ಅವರಲ್ಲಿ ಎಂಟು ಜನ ಲೆಕ್ಕಮಾಡಿಕೊಂಡು, 'ದಿಕ್ಕನ್ಯಕಾ ನಾಟ್ಯ'ವನ್ನು ಆಡಬೇಕೆಂದು ರಂಗವನ್ನು ಹೊಕ್ಕರು. ಅವರ ಸೊಬಗನ್ನು ಏನೆಂದು ಹೇಳಲಿ!

ಇಂದ್ರ ಮೊದಲಾದ ದಿಕ್ಪಾಲರ ಭಾಗ್ಯವು ಈ ರಾಜೇಂದ್ರನನ್ನು ಬಂದು ಸೇರಿತೋ ಎನ್ನಿಸಿ ಆ ಸಿಂಹೇಂದ್ರಮಧ್ಯಮೆಯರು ಇಂದ್ರ ಅಗ್ನಿ ಮೊದಲಾದ ಎಂಟು ದಿಕ್ಕುಗಳಲ್ಲಿ ಬಂದು ನಿಂತರು. ಎಂಟು ಪಾತ್ರಗಳು ಎಂಟು ದಿಕ್ಕುಗಳಲ್ಲಿ ನಿಂತು, ಒಬ್ಬರೊಬ್ಬರನ್ನು ದೃಷ್ಟಿಯಿಂದ ಗಂಟು ಹಾಕಿಕೊಂಡು, ಪ್ರೀತಿಯ ನಡೆಕೋಟೆಯು ಸುತ್ತುವ ಹಾಗೆ ಸುತ್ತಿದರು.

ಮೊದಲು ಒಟ್ಟಾಗಿ ಮೊತ್ತವಾಗಿ ನಾಟ್ಯಶಾಲೆಯ ಸುತ್ತ ನಲಿದರು; ಅನಂತರ ಮೊತ್ತದಿಂದ ಒಬ್ಬರು ಇಬ್ಬರು ಮುಂದೆ ನಡೆದು ಬೇರೆಬೇರೆಯಾಗಿ ನಟಿಸಿದರು.

" ಭರತಭೂಪಾಲನು ಮುಂದೆ ದಿಗ್ವಿಜಯಕ್ಕೆ ಹೀಗೆ ಹೊರಡುತ್ತಾನೆ " ಎಂಬುದನ್ನು ಸೂಚಿಸುವಂತೆ ಮುಂದೆ ಬರುವರು ; " ಪೃಥ್ವಿಯನ್ನು ಸಾಧಿಸಿ ಚಕ್ರವರ್ತಿಯಾದ ಮೇಲೆ ಪಟ್ಟಣವನ್ನು ಹೀಗೆ ಪ್ರವೇಶಿಸುವನು " ಎಂಬುವನ್ನು ಕನ್ನಡಿಸುವ ಹಾಗೆ ಮತ್ತೆ ಹಿಂದೆ ಹೋಗುವರು.

" ಮುಂದೆ ಮಾಗಧೇಂದ್ರನ ಮೇಲೆ ಹೀಗೆ ಹೋಗಿಬರುವೆ. ಮುಂದೆ ವರತನುವಿನ ಮೇಲೆ ಹೀಗೆ " ಎಂಬುದನ್ನು ಸೂಚಿಸುವಂತೆ ಒಂದೊಂದು ದಿಕ್ಕಿಗೆ ಒಬ್ಬೊಬ್ಬರು ಹೋಗುವರು, ಮತ್ತೆ ತಿರುಗುವರು.

ದಿಗ್ವಿಜಯದ ಕಾಲದಲ್ಲಿ ರಾಜನ ವಾಹನರತ್ನವಾದ ಪಟ್ಟದ ಕುದುರೆ ಲಂಘಿಸುವುದನ್ನು ತೋರಿಸುವ ಹಾಗೆ ಅವರು ಲಂಘಿಸುವರು ; ಕಾಲಿನ ಗೆಜ್ಜೆ ಝುಲಿರುಝುಲಿರು ಎನ್ನುವಂತೆ ನಾಟ್ಯರಂಗದಲ್ಲಿ ಸುತ್ತ ಸುಳಿಯುವರು.

ಮುಂದೆ ವಜ್ರದ ಕವಾಟವನ್ನು ರಾಜನು ದಿಗ್ವಿಜಯ ಸಮಯದಲ್ಲಿ ಹೀಗೆ ನೂಕಿ ಒದೆಯುತ್ತಾನೆ ಎಂಬುದನ್ನು ನಾಟಕದಿಂದ ಹೇಳುವ ಹಾಗೆ ಮೈಯೊಲೆದು ಒತ್ತಿ ಕಾಲಿನಿಂದ ಒದೆದು ತೋರಿದರು.

' ಮುಂದೆ ಮ್ಲೇಚ್ಛರಾಜನು ಅಹಮ್ಮಿನಿಂದ ನಿನ್ನಮೇಲೆ ಹೀಗೆ ಹೊನ್ನಿನ ಮಳೆ ಕರೆಯುತ್ತಾನೆ ' ಎಂಬಂತೆ ಒಮ್ಮೆ ಸೂತ್ರವನ್ನು ಒತ್ತಿ ರಾಜನಿಗೆ ಮೇಲಿನಿಂದ ಪನ್ನೀರನ್ನು ಚಿಮ್ಮಿಸಿದರು.

'ಮುಂದೆ ಗಂಗಾಸಿಂಧುಗಳು ಹುಟ್ಟುವ ಗಿರಿಕೂಟದಲ್ಲಿ ನಿನಗೆ ಹೀಗೆ ಸ್ನಾನವಾಗುವುದು ' ಎಂಬುದನ್ನು ಅಭಿನಯಿಸುವಂತೆ ನಗೆಯ ಬೆಳ್ದಿಂಗಳಿಂದ ರಾಜನಿಗೆ ಅಭಿಷೇಕಮಾಡಿದರು.

' ಮುಂದೆ ವಿಜಯಾರ್ಧದೇವನೂ ಹಿಮವಂತದೇವನೂ ನಿನಗೆ ದಿಗ್ವಿಜಯ ಕಾಲದಲ್ಲಿ ಒಪ್ಪಿಸುವ ಆಭರಣಗಳು ಹೀಗಿರುವುವು ' ಎಂಬುದನ್ನು ವಿವರಿಸುವಂತೆ ಆ ನೀರೆಯರು ತಮ್ಮ ಕೆಂಪುಹಲ್ಲಿನ ಕಾಂತಿಯನ್ನೂ ಕಣ್ಣುಗಳ ಕಾಂತಿಯನ್ನೂ ಕೂಡಿಸಿ ಕುಣಿಸಿದರು.

ಮುಂದೆ ರಾಜನಿಗೆ ವಿಜಯಾರ್ಧಪರ್ವತದಲ್ಲಿ ಸ್ತ್ರೀರತ್ನವೊಬ್ಬಳು ದೊರೆಕೊಳ್ಳುವಳು ಎಂಬುದನ್ನು ತೋರಿಸುವಂತೆ — ಮುಂದೆ ನರ್ತಿಸಿ ನಿಂತ ಹೆಣ್ಣಿನ ಒತ್ತಿಗೆ ಉಳಿದವರ ಮೊತ್ತದಿಂದ ಮತ್ತೊಬ್ಬಳು ಬಂದು ಸೇರಿದಳು.

ಕಾಲಿಗೆ ಹಾಕಿದ ಅಂದುಗೆಯೇ ಹೊನ್ನಸಂಕಲೆ, ಮೊಲೆಗಳೇ ಕುಂಭ, ನೀಟವಾದ ತೋಳೇ ಸುಂಡಿಲು — ಎಂಬ ಹಾಗಿರಲು, ಎಂಟು ಪಾತ್ರಗಳು ಎಂಟು ದಿಕ್ಕಿಗೆ ಎಂಟು ದಿಗ್ಗಜಗಳಂತೆ ಹಜ್ಜೆಯಿಡುವರು.

ರಾಯನಿಗೆ ಸೊಗಸಾಗುವಂತೆ ನೋಡುತ್ತ, ಆಡುತ್ತ, ಮುಖವನ್ನು ಅತ್ತ ತಿರುಗಿಸಿ ತಮ್ಮನ್ನು ತಾವು ನೋಡುತ್ತ, "ಈ ಸೌಭಾಗ್ಯ ನಿಮಗುಂಟೆ ?" ಎಂದು ದಿಕ್ಕನ್ಯಕೆಯರನ್ನು ನೋಡಿ ಅಪಹಾಸ್ಯಮಾಡುವಂತೆ ನಗುತ್ತ ನುತ್ತ ಹರಿದಾಡಿದರು.

ಒಮ್ಮೆ ಒಬ್ಬಳಾಡುವಳು. ಒಮ್ಮೆ ಇಬ್ಬರಾಡುವರು. ಒಮ್ಮೊಮ್ಮೆ ಮೂವರು, ನಾಲ್ವರು ಆಡುವರು. ಒಂದೊಂದು ಸಲವೂ ಹಿಂದೆ ಆಡಿದುದ ಕ್ಕಿಂತ ಬೇರೆಯಾಗಿ, ಹೊಸಹೊಸ ಪರಿಯಾಗಿ ಸರ್ವರೂ ನಟಿಸುವರು.

ಹೀಗೆ ಆ ಎಂಟು ಮಂದಿ ಪಾತ್ರದವರೂ ಎಂಟು ದಿಕ್ಕಿನ ಕನ್ನೆಯ ರಂತೆ ನಟಿಸಿ, ತಮ್ಮ ತಮ್ಮ ಸ್ಥಾನಕ್ಕೆ ತಾವು ಹೋಗುವಂತೆ ಹಿಂದಕ್ಕೆ ಸರಿದುಹೋದರು.

ಆ ಕೂಡಲೆ ಇನ್ನೆಂಟು ಮಂದಿ ಕೋಮಳೆಯರು ದುಳದುಳನೆ ರಾಯನ ಮುಂದೆ ಬಂದು, 'ಜಲಕನ್ನಿಕಾನಾಟ್ಯ'ಕ್ಕೆ ಎಂದು ನಿಂತರು. ಮಝು! ಆ ಚೆಲುವನ್ನು ಏನೆಂದು ವರ್ಣಿಸಲಿ!

ಅರ್ಧಚಂದ್ರಾಕಾರದ ಉಪಸಮುದ್ರದ ಹಾಗೆ ದೇವಗಂಗೆ ಬಂದು ನಿಂತಿತೋ ಎನ್ನಿಸಿ, ಅರ್ಧಚಂದ್ರಾಕೃತಿಯಿಂದ ಆ ಎಂಟು ಪಾತ್ರಗಳೂ ರಾಜನೆದುರು ನಿಂತರು, 'ಆಕಾರ ಚಂದ್ರನಾದ ಮೇಲೆ ನೀರು ಸಿಹಿಯಾಗ ಬೇಕು! ಅದೇಕೆ ತಾನು ಉಪ್ಪಾಯಿತು?' ಎಂದು ಆ ಕಡಲನ್ನು ತೊಲಗಿಸಿ ಚಂದ್ರನಂತೆ ನಿಂತ ದೇವಗಂಗೆಯ ಹಾಗಿದ್ದರು.

ಲಾವಣ್ಯವೇ ಜಲ, ತೋಳೇ ಅಲೆ, ಹೊಕ್ಕುಳೇ ಸುಳಿ, ಚಂಚಲವಾದ ದೃಷ್ಟಿಯೆ ಎಳೆಮೀನು — ಭಾವಿಸಿದರೆ, ಜಲದೇವಿಯರಾಗಲು ಇವರೇ ತಕ್ಕ ವರು ಎಂಬಂತೆ ಆ ವನಿತೆಯರಿದ್ದರು.

ಅರ್ಧಚಂದ್ರಾಕಾರ ತಪ್ಪದ ಹಾಗೆ ದೊರೆಯ ಇದಿರಿಗೆ ನಲಿದು ಬಂದರು. ಆಗಲೇ ತಿರುಗಿದರು — ಡೊಂಕನ್ನು ಕಳೆದು, ಗಂಗೆ ಹರಿಯು ವಂತೆ ನೇರವಾಗಿ.

ರಂಗದಲ್ಲಿ ಎಲ್ಲರೂ ಮೊತ್ತವಾಗಿ ನಿಂತರು ಮತ್ತೆ ಎಂಟು ದೆಸೆಗೆ ಕವಲಾದರು. ಬಳ್ಳಿ ಹಬ್ಬಿದಂತೆ ಹಬ್ಬಿ ಹರಿದಾಗ, ಶೃಂಗಾರದ ಗಂಗೆ ಹರಿದ ಹಾಗಾಯಿತು.

ಅಲೆಯನ್ನು ಬೆನ್ನಟ್ಟುವ ಅಲೆಯ ಹಾಗೆ ಒಬ್ಬರ ಹಿಂದೆ ಒಬ್ಬರು ಅಟ್ಟಿ ಹರಿಯುವರು. ತಿರುಗಿ, ಎಂಟುಮಂದಿ ಸುಳಿಯಂತೆ ಭುಗಭುಗನೆ ಇರದೆ ಸುತ್ತುವರು.

ಒಮ್ಮೆ ಡೊಂಕಾಗಿ ಹರಿಯುವರು, ಒಮ್ಮೆ ನೇರವಾಗಿ, ಒಮ್ಮೆ ತಡೆದು ತಡೆದು, ಒಮ್ಮೆ ಇದ್ದಕ್ಕಿದ್ದಂತೆ ಮೇಲೆ ಉಕ್ಕುವ ಸುಳಿಹೊಳೆಯ ಹಾಗೆ ಬಿಂಕದಿಂದ ಆಟ ತೋರುವರು.

ಮಿರುಮಿರನೆ ಆದ ಮೈಯ ಹೊಳಪಿನಿಂದ, ಅಲೆಯಲೆಯಾಗಿ ನಿರಿ ಹಿಡಿದು ಏಳುವ ಚಿನ್ನದ ಕಾಸೆಯಿಂದ, ಕುರುಕುರನೆ ರಂಗದಲ್ಲಿ ಮೆಟ್ಟುವ ಹಜ್ಜೆ ಯಿಂದ, ಅವರು ತಂಪಾದ ಬಯಲಿನ ತೊರೆ ಹೊಳೆಯುವಂತೆ ಹೊಳೆದರು.

ಅಲೆಅಲೆಯಾಗಿ ಕಿಂಕಿಣಿಯ ನಾದ, ಕಂಕಣದ ಧ್ವನಿ, ಕೈಯ ಬಳೆಗಳ ಶಬ್ದ ಇವು ಕೂಡಿ ಗಳಗಳ ಗುಳುಗುಳು ಎಂದು ನಲಿಯುತ್ತ ಹರಿಯುವ ತಂಪುಹೊಳೆಯಂತೆ ಹೊಳೆದರು. ಏನು ಹೇಳಲಿ!

"ಇದು ನೆಲ ನೆನೆಯದ ಗಂಗೆ! ಇದು ಕಣ್ಣುಮೀನಿನ ಗಂಗೆ! ಇದು ಹಲವು ಬಣ್ಣದ ರಸಗಂಗೆ! ಮೊಲೆ ಮುಡಿಗಳನ್ನು ಪಡೆದ ಗಂಗೆ ಗಳು ಎಲ್ಲಿ ಬಂದುವೊ!" ಎಂದು ಅರಸನು ಶಿರತೂಗಿ ಮೆಚ್ಚಿದನು.

ಅರಸನ ಲಾವಣ್ಯದ ಸಮುದ್ರದಲ್ಲಿ ಆ ಪಾತ್ರಸತಿಯರ ದೃಷ್ಟಿಮತ್ಸ್ಯ ಗಳು ಆಡಿದುವು. ಅದೇ ತರುಣಿಯರ ದೇಹಕಾಂತಿಯ ಹೊಳೆಗಳಲ್ಲಿ ರಾಜನ ಕಣ್ಣುಮೀನುಗಳು ಆಡಿದುವು.

ಶೃಂಗಾರದ ಸಮುದ್ರವೇ ಮೇಲೆ ಕವಿಯಿತು ಎಂಬಂತೆ ಅವರು ಭರತೇಶನಿಗೆ ಎದುರಾಗಿ ನಡೆದರು. ದೊರೆಯ ಗಾಂಭೀರ್ಯವನ್ನು ಕಂಡು, ಸಮುದ್ರ ನಾಚಿ ಹಿಂದಿರುಗುವಂತೆ ಅತ್ತ ಜಾರಿದರು.

ತಾವರೆಯಂತಹ ಕೈಕಾಲುಗಳಿಂದ, ತಾವರೆಯಂತಹ ಮುಖ ಮೊಲೆಗಳಿಂದ, ತಾವರೆಯ ಕೊಳವೇ ಎದ್ದು ನರ್ತಿಸುವುದೋ ಎಂಬ ಹಾಗೆ ಆ ವಧುಗಳು ನಟಿಸಿದರು.

ನೈದಿಲೆಯು ಹಾಗಿರುವ ದೇಹದ ಕಂಪು, ನೆಯ್ದಿಲೆಯು ಹಾಗಿರುವ ಮೈಯ ಬಣ್ಣ, ಕನ್ನೈದಿಲೆಯು ಹಾಗಿರುವ ಕಣ್ಣು — ಉಳ್ಳ ಆ ಹೆಣ್ಣುಗಳು ಮೈದೋರಿ ನೃತ್ಯವಾಡಿದರೆ, ನೆಯ್ದಿಲೆಯ ಕೊಳ ಎದ್ದು ಕುಣಿದ ಹಾಗಿತ್ತು.

ತಕದಿಕ ಕಿಣತೋಂಗ ತದಿಕಿಟ ದಿಮಿದಿಮಿ ದಿಕುದಿಕು ದಿಮಿಕೆಂಬ ಧ್ವನಿಗೆ ಚಕಚಕನೆ ಕೈಕಾಲುಗಳನ್ನು ಅತ್ತಿತ್ತ ಸೂಚಕಮಾಡಿ ಸೊಬಗು ತೋರಿದರು.

ಚಿನ್ನ ರತ್ನಗಳ ಆಭರಣದ ಕಿರಣ ಅವರ ದೇಹಕಾಂತಿಯೊಡನೆ ಬೆರೆತರೆ, ಮಿಂಚಿನ ಬಳ್ಳಿಯಂತೆ ಮಿಣಿಮಿಣಿಸುತ್ತ ಕಂಚುಮಿಂಚಾಗಿ ಅತ್ತಿತ್ತ ಹೊಳೆಯುವರು.

ಮುಖದ ರಸದಿಂದ, ಕಣ್ಣ ಬೆಳಗಿನ ಹೊಳೆಯಿಂದ, ನಗೆಯ ಒಂದು ಅಮೃತಧಾರೆಯಿಂದ ಮೊಗೆದು ಮೊಗೆದು ಆ ಪಾತ್ರದ ಕನ್ನೆಯರು ಜಲದೇವಿಯರಂತೆ ರಾಯನಿಗೆ ಒಲಿದು ಅಭಿಷೇಕಮಾಡಿದರು.

ಬಳಿಕ ಅವರಿಗೆ ಇಷ್ಟು ಮೈ ಬೆವರಿತು. ಆಗ ನೋಡಿದರೆ, "ಖಂಡಿತವಾಗಿಯೂ ಇವರು ಜಲದಿಂದ ಹೊರಟುಬಂದ ಜಲಕನ್ನಿಕೆಯರೇ, ನಿಜ!" ಎಂಬಂತೆ ಆ ಜಲಜಗಂಧಿನಿಯರು ಒಪ್ಪಿದರು.

ನಯ್ಯ ನುಣುಪು ಅತಿಶಯವಾಗಿ ಪ್ರಕಟವಾಗುವಂತೆ ಜಲಕನ್ನಿಕಾ ನಾಟ್ಯವನ್ನು ಆ ಭೂಪತಿಯ ಕಣ್ಣೆದಿರಲ್ಲಿ ಆಡಿ ತೋರಿ, ಆ ಪಾತ್ರದ ಸತಿಯರು ಅಮರಸ್ತ್ರೀಯರಂತೆ ಅದೃಶ್ಯವಾದರು.

೭

ತಾಳಮೇಳವನ್ನು ಹೊಂದಿಕೊಂಡು ಸಂಗೀತದ ಬಾಲೆಯರು ಆಯೆಂದು ಕಾಂಬೋದಿರಾಗವನ್ನು ಆಲಾಪಮಾಡಿದರು. ಪಾತ್ರವಾಡಿದ ಆ ಸತಿಯರಿಗೆ ತಂಪಾಗುವಂತೆ, ದೊರೆಗೆ ಇಂಪಾಗಿ ಅವನು ತಲೆದೂಗುವಂತೆ, ಸೂತ್ರವನ್ನು ತೆಗೆಯುವಂತೆ ರಾಗವನ್ನೆತ್ತಿ ಪವಿತ್ರವಾದ ಆತ್ಮಕಲೆಯನ್ನು ಹಾಡಿದರು.

"ಬೆಳಗಿನ ಬೊಂಬೆ! ಬೆಳ್ದಿಂಗಳ ಬೊಂಬೆ! ತಿಂಗಳ ಬೊಂಬೆ! ಜೊನ್ನದ ಬೊಂಬೆ! ತಿಳಿವಿನ ಬೊಂಬೆ! ಬೋಧಪ ಬೊಂಬೆ!" ಎಂದು ಆತ್ಮಕಲೆಯನ್ನು ಕನ್ನಡಿಸಿ ಹಾಡಿದರು. "ಸುರರನ್ನು ಸೋಲಿಸುವ ಸೊಬಗಿನ ನಮ್ಮ ಭರತಭೂವರನ ಚಿತ್ತವನ್ನು ಸೋಲಿಸಿದ ಗುರು ಹಂಸನಾಥಾ, ಮಹಾದೇವ! ನಮ್ಮನ್ನು ಉದ್ಧಾರಮಾಡು" ಎಂದು ಸೊಗಸು ತೋರಿ ಹಾಡಿದರು.

"ಕಾಣಿಸಿಕೊಳ್ಳುತ್ತ, ಮರೆಯಾಗುತ್ತ, ಚಕ್ರವರ್ತಿಯ ಮನದಲ್ಲಿ ಕುಳಿತಿರುವ ವರ ಹಂಸನಾಥಾ, ನಮಗೆ ಸನ್ಮತಿಯನ್ನು ತೋರು" ಎಂದು ಅವರು ಹಾಡುತ್ತಿರುವಾಗ ಆ ಹದಿನಾರು ಪಾತ್ರದ ಹೆಣ್ಣುಗಳೂ ಒಂದುಗೂಡಿ ಬಂದರು. ಹಂಸನೆಂಬ ಆತನ ಕಲೆಯೆಂಬ ತಾವರೆಗಳ ನಡುವೆ ಹಂಸನಂತೆ ವಿಹರಿಸುವ ನೃಪರಾಜಹಂಸನ ಸಮ್ಮುಖದಲ್ಲಿ 'ಹಂಸಮಂಡಳಿ'ಯೆಂಬ ನಾಟ್ಯವನ್ನು ತೊಡಗಿದರು. ಇನ್ನು ಅಲ್ಲಿ ಏನು ಸೊಬಗಾಯಿತೋ!

ಎರಡೆಂಟು ಪಾತ್ರಗಳು ಎರಡೆಂಟು ದಿಕ್ಕಿನಲ್ಲಿ ಓರಣವಾಗಿ ನಡೆದು ನಿಂತಾಗ, ಆ ನಾಟ್ಯರಂಗವೆಂಬ ಪದ್ಮದ ಹದಿನಾರು ಎಸಳುಗಳಿಗೆ ಓರಗೆಯಾಗಿ ಮೆರೆದರು. ಅಷ್ಟೇ ಏಕೆ, ನಾಟ್ಯಮಂಟಪವೆಂಬ ಕೊಳದಲ್ಲಿ ಕಂಗೊಳಿಸುವ ಹದಿನಾರು ಕಮಲಗಳೊ ಎಂಬಂತೆ ಆ ಕಮಲಮುಖಿಯರು ಬಳಸಿ ನಿಂತಿದ್ದರು. ಆ ಮಣಿಮಂಟಪವೆ ಕೊಳ, ಹದಿನಾರು ಹೆಣ್ಣುಗಳೆ ಹದಿನಾರು ಕಮಲಗಳು, ರಾಜನೇ ಅಲ್ಲಿ ರಾಜಹಂಸ, ಮಂತ್ರಿಯೇ ದಡದಲ್ಲಿ ಸಂಧ್ಯಾವಂದನೆಮಾಡುತ್ತ ಕುಳಿತಿದ್ದ ಬ್ರಾಹ್ಮಣ – ಎಂಬಂತೆ ಆಗ ಕಂಡಿತು.

ಹದಿನಾರು ವನಿತೆಯರೂ ಎಡದ ಚಾರಿ ಬಲದ ಚಾರಿ ಕೂಡಿ ಒಮ್ಮೊಮ್ಮೆ ತಿರುಗಿದರು. ಒಮ್ಮೆ ಮೂಡಪಡುವಲು, ಒಮ್ಮೆ ತೆಂಕಬಡಗಲು ನಡೆದು, ಮತ್ತೆ ನೀಡಿ ಸಾಲಾದರು. ಹೆಣ್ಣುಹಂಸಗಳು ಕೊಳದಲ್ಲಿ ಸುಳಿಯುವಂತೆ ಆ ಎಳೆಯ ಹೆಣ್ಣುಗಳು ಆ ನೆಲದಲ್ಲಿ ಪಣ್ಣಪಣ್ಣನೆ ಸುಳಿದು, ಭರತೇಶನಿಗೆ ಕಣ್ಣಹಬ್ಬವನ್ನು ಕಾಣಿಸಿದರು. ಹಂಸಗಳಿಗೆ ಹೆಜ್ಜೆಹಾಕುವುದನ್ನು ಕಲಿಸುವುದು ಈ ಸತಿಯರಿಗೆ ಸಂಸಿದ್ಧವಾದ ಕುಲದ ಬಿರುದು ಎಂಬಂತೆ 'ಹಂಸಮಂಡಳಿ' ಎಂಬ ನಾಟಕವನ್ನು ಅವರು ತೋರಿಸುವುದರಲ್ಲಿ ಏನೂ ಆಶ್ಚರ್ಯವಿಲ್ಲ, ಅದು ಅವರಿಗೆ ಬಹು ಸದರದ ಆಟ!

ಹಂಸಗಳು ಗುಂಪುಕೂಡಿ ನಡೆಯುವಾಗ ಚಿಲಿಪಿಲಿ ಎಂದು ಶಬ್ದ ಮಾಡುತ್ತ ನಡೆಯುವಂತೆ, ಕಾಲಿನ ಅಂದುಗೆ ಘಲಿಘಲಿ ಝಲಿಝಲಿ ಎಂದು ಎನ್ನುವಂತೆ ಚಂದದಿಂದ ಹಜ್ಜೆಹಿಡಿದರು.

ಹಕ್ಕಿ ಹೋದ ದಾರಿಹಿಡಿದು ಹಕ್ಕಿ ಹೋಗುವಂತೆ, ಒಮ್ಮೆ ಸಾಲಿಕ್ಕಿ ಹೋಗುವರು. ದಿಕ್ಕುದಿಕ್ಕಿಗೆ ಚೆದರುವಂತೆ ಅಗಲುವರು ಎನ್ನುವಷ್ಟರೊಳಗೆ, ಅಹೋ ! ಚಿಕ್ಕನೆ ಒಂದಾಗುವರು.

ರೆಕ್ಕೆಯ ಆಟವನ್ನು ಭುಜದಲ್ಲಿ ತೋರುವರು. ಹಜ್ಜೆಯಿಕ್ಕಿ ಕಾಲ್ನಡೆಯನ್ನು ತೋರುವರು. ಮೊಗ್ಗಿನಂತೆ ಮುಗಿದ ಕೈಯನ್ನು ಕೊಕ್ಕಿನಂತೆ ಇಕ್ಕಿ, ಕೊಕ್ಕಿನಾಟದ ಕೌಶಲವನ್ನು ತೋರುವರು.

ತಾವರೆಯ ಮೇಲಿದ್ದ ಗಂಡುಹಕ್ಕಿಯನ್ನು ನೀರಿನಲ್ಲಿ ಒಲಿದಾಡುವ ಹೆಣ್ಣುಹಂಸಗಳು ಬಯಸಿ ದೃಷ್ಟಿಸುವಂತೆ ಗದ್ದುಗೆಯ ಮೇಲಿದ್ದ ಚೆಲುವನನ್ನು ಕ್ರಮವರಿತು ನೋಡುವರು.

ಹೆಣ್ಣುಹಕ್ಕಿಯೊಂದೊಂದನ್ನು ಮರೆಮಾಡಿ, ಗಂಡನಮೇಲೆ ತನಗಿರುವ ಪ್ರೀತಿಯನ್ನು ನೋಟದಲ್ಲಿ ಸೂಚಿಸುವುದಕ್ಕಾಗಿ ನಾಚಿಕೆಯಿಲ್ಲದೆ ಮುಂತ್ರಿಗೆ ಒಬ್ಬಳನ್ನು ಮರೆಮಾಡಿ, ಜಾಣತನದಿಂದ ತಮ್ಮ ಮನಸ್ಸನ್ನು ಕಣ್ಣಿನಲ್ಲಿ ತೋರಿದರು.

ಗಂಡು ಹಂಸ ಒಂದು ಹೆಣ್ಣಿಗೆ ಒಲಿದರೆ, ಅದನ್ನು ಕಂಡು ಇನ್ನೊಂದು ಹೆಣ್ಣು ಮುನಿಸಿಕೊಂಡು ಹೋಗುವ ಹಾಗೆ ಒಬ್ಬಳು ಹಿಂಡನ್ನು ಅಗಲಿ ಹೋದರೆ — ರಾಜ ಅದನ್ನು ಕಂಡು, ಒಳಗೊಳಗೇ ನಗುವನು. ಆ ಹಕ್ಕಿ ಸ್ವಲ್ಪ ದೂರ ಹೋಗಿ, ಮುಂದೆ ಕಾಣೀಳದೆ, ಕೋಪವನ್ನು ಮರೆತು ಹಿಂದಿರುಗಿದ ಹಾಗೆ — ಹೋದಾಕೆ ಹಿಂದಿರುಗಿ ತನ್ನ ರಮಣನ ರಸಿಕತೆಗೆ ಸಾಕ್ಷಿಯಾಗುವಳು.

ಒಮ್ಮೆ, ಹೂವಿನಲ್ಲಿ ಹಂಸ ಕುಳಿತಿರುವಂತೆ ಆ ಕೊಳದಲ್ಲಿ ಕುಳಿತಿರುವರು. ಇನ್ನೊಮ್ಮೆ, ಬಯಲಿನಲ್ಲಿ ಕುಳಿತಂತೆ ಕುಳಿತಿರುವರು. ಪವನಾಭ್ಯಾಸದ ಬಲದಿಂದ ಚಲಿಸದ ಹಾಗೆ ನೆಲವನ್ನು ಮುಟ್ಟದೆ ಗಗನದಲ್ಲಿ ಮುಂಡಿಸಿ ಕುಳಿತು, ಜೋಕೆಯಿಂದ ಮೆಲ್ಲನೆ ಭೂಮಿಗೆ ಇಳಿಯುವರು.

ಕೊಳದಿಂದ ಕೊಳಗಳಿಗೆ ಹಂಸ ಹಾರುವ ಹಾಗೆ ಛಳಿಲನೆ ಮೇಲಕ್ಕೆ ನೆಗೆದು, ತೋಳನ್ನು ಅಲುಗಿಸಿ, ಕಾಲನ್ನು ನಾಲ್ಕುಮಾರು ನೀಡಿ, ಆಕಾಶ ದಲ್ಲಿ ಹಕ್ಕಿಯಂತೆ ಇಳಿದು ಬರುವರು. ರಾಜನು ತಲೆದೂಗುವಂತೆ, ಮಂತ್ರಿಗೆ ವಿಸ್ಮಯವಾಗುವಂತೆ, ಅವರು ಇಳಿಯುವ ಹಂಸಗಳಂತೆ ಆಕಾಶ ದಲ್ಲಿ ನಾಲ್ಕೆಂಟುಮಾರು ಬಂದು, ಜೋಕೆಯಿಂದ ಭೂಮಿಗೆ ಇಳಿಯುವರು.

ಮತ್ತೆ ಮೇಲಕ್ಕೆ ನೆಗೆಯುವರು. ಹಕ್ಕಿ ಹಕ್ಕಿಯನ್ನು ಬೆನ್ನುಹತ್ತಿ ಹೋಗುವಂತೆ ಹೋಗುವರು. ಆಕಾಶದಲ್ಲಿ ಹತ್ತೆಂಟುಮಾರು ಹೋಗಿ, ರಾಜೋತ್ತಮನನ್ನು ಕಂಡು, ಅವನ ಎದುರಿನಲ್ಲಿ ಇಳಿಯುವರು. ಹಾಗೆ ಅವರು ಹಾರಿಬಂದು ಇಳಿಯುವಾಗ 'ರಾಯನನ್ನು ನೋಡಲು ಬರುತ್ತಿರುವ ಸುರನಾರಿಯರೋ, ಗರುಡಕನ್ನಿಕೆಯರೋ, ಅಥವಾ ಗಂಧರ್ವಕನ್ಯಕೆ ಯರೋ, ಇಲ್ಲವೆ ಖೇಚರಿಯರೋ' ಎಂಬಂತೆ ಕಾಣುತ್ತಿತ್ತು.

ಮುಖ ಮೊಲೆಯಡಿಯಾಗಿ, ಕಾಲುನೀಡಿ, ಕಾಸೆಯನ್ನೂ ತೋಳು ಗಳನ್ನೂ ಅಲುಗುತ್ತ ಮೇಲೆ ಬರುವ ಆ ಮುಗ್ಧೆಯರು, ಗಗನಗಂಗೆಯಲ್ಲಿ ಮೆಲ್ಲನೆ ಈಜಿ ಬರುತ್ತಿರುವಂತೆ ಕಂಡುಬಂದರು. ಆ ಲಲನೆಯರನ್ನು ನೋಡಿ, ಭೂಪಾಲನು ತನ್ನಲ್ಲಿ ತಾನು 'ಮಲೆತು ಎದುರಿಗೆ ಎದ್ದುನಿಲ್ಲುವ ಮೊಲೆಗಳಿಂದ ಇವರು ಇಷ್ಟು ತಳಿಕೆಳಗಾವರು' ಎಂದುಕೊಂಡು ಒಳಗೇ ಮೆಲ್ಲಗೆ ನಕ್ಕನು.

ಗಗನವಲ್ಲಿ ಹಾಗೆ ಬಂದು, ನೃಪನ ಬೆನ್ನಿನ ಗೋಡೆಯಲ್ಲಿ ಇದ್ದ ಆದಿಜಿನನ ಬಿಂಬಕ್ಕೆ ಎದುರಿನಲ್ಲಿದ್ದ ಗಗನಪುರುಷ ಸಿದ್ಧಬಿಂಬಗಳಿಗೆ ಕೈಮುಗಿದು ಇಳಿದರು. ಕೆಲವರು ಕೈಮುಗಿದು ಇಳಿದರು. ಕೆಲವರು ಸೂತ್ರವನ್ನು ಅಲುಗಿಸಿ, ನೃಪನ ತಲೆಗೂ ಆದಿಜಿನ ಬಿಂಬದ ಎದುರಿನ ಪ್ರತಿಮೆಗೂ ಹೂವಿನ ಮಳೆಯನ್ನು ಕರೆದು ಇಳಿದರು. ಭೂಷಣಗಳ ಕಾಂತಿ, ಕಾಸೆಯ ಕಾಂತಿ, ಚಲ್ಲಣದ ಗೆಜ್ಜೆಯ ಗಲಭೆ – ಇವುಗಳ ಮಧ್ಯೆ ವನಿತೆಯರು ನಕ್ಷತ್ರಗಳ ಗುಂಪು ಭೂಮಿಗೆ ಇಳಿದ ಹಾಗೆ ಅಣಅಣನೆ ಇಳಿದರು.

ಅವರು ಯಾವಾಗಲೂ ರಾಜನ ಪಕ್ಕದಲ್ಲೇ ಬಂದು ಇಳಿಯುವವರು; ಆದರೆ ಇಂದು ಹತ್ತಿರ ಮಂತ್ರಿ ಇದ್ದನಾದ ಕಾರಣ, ಆ ಕುಲವನಿತೆಯರು ಹಿಂದೆ ಇಷ್ಟುದೂರದಲ್ಲಿ ಇಳಿದು, ರಾಜನ ಸಮುಖದಲ್ಲಿ ನಿಂತರು.

೮

ರಾಜನು ತುಂಬ ಹರ್ಷಪಟ್ಟು, 'ನಾಟ್ಯ ಸಾಕು' ಎಂದು ಕೈಸನ್ನೆ ಮಾಡಿದನು. ಆದಿನಾಥನ ಗೀತದೊಡನೆ ಎಲ್ಲರೂ ನಮಿಸಿ, ಭಾಪು ಭಾಪು ಎನ್ನಿಸಿಕೊಂಡು ನಿಲ್ಲಿಸಿದರು.

ಇತ್ತ ರಾಜನು ರಂಗಶೇಖರನನ್ನೂ ಮೇಳವನ್ನೂ ಮನ್ನಿಸಿದನು. ಸಿಂಜಿನಿ ಶಿಖರಿಣಿಯರಿಗೆ ಪ್ರೀತಿಯಿಂದ ಅಪರಂಜಿಯಾಭರಣಗಳನ್ನು ಕೊಟ್ಟನು.

ಬಳಿಕ ಮಂತ್ರಿಯ ಮುಖ ನೋಡಿ, "ನಿನಗೆ ಬಳಲಿಕೆಯಾಯಿತು!' ಎಂದು ಒಳ್ಳೆಯ ಮಾತು ಹೇಳಿದನು.

ಅದಕ್ಕೆ ಆ ಮಂತ್ರಿವರ್ಯನು ಹೇಳಿದನು :

"ಇದು ಪುಣ್ಯನಾಟಕ, ಸ್ವಾಮಿ. ಇದು ವಿವೇಕಶರಣ್ಯನಾಟಕ, ದೇವಾ. ಇದು ಗಣ್ಯನಾಟಕ, ಚಕ್ರಿ . ಇದು ವಿಚಿತ್ರವಾದ ಲಾವಣ್ಯನಾಟಕ, ರಾಯಾ.... ಇದು ಹೊರಗೆ ಭೋಗದ ಅಂಗವನ್ನು ತೋರುತ್ತಿದೆಯಾದರೂ ಒಳಗೆ ಯೋಗವನ್ನು ತೋರುತ್ತಿದೆ. ರಾಗಗಳು ರಾಗದ ಅಂಗವನ್ನು ತೋರಿದರೂ, ಅವುಗಳ ಭಾವದಲ್ಲಿ ವೀತರಾಗತ್ವವಿದೆ.... ಲೋಕದವರಿಗೆ ಇದು ತಾಂಡವನೃತ್ಯ; ಆದರೆ ಹಂಸನಾಥನನ್ನು ಆಲೋಕಿಸುವವರಿಗೆ ಇಲ್ಲಿ ತತ್ತ್ವವಿದೆ. ಸ್ವರ್ಗಲೋಕದ ಸುಖದ ಅನುಭವವುಳ್ಳ ಇದು ಸಿದ್ಧಲೋಕವನ್ನು ಜ್ಞಾಪಿಸುತ್ತಿದೆ.... ಜಿನಜಿನ! ಏನು ಕಲಿಕೆ! ಏನು ಕಂಡೆ! ನಿನ್ನ ಅನುಭವ ಇದು ವಿಚಿತ್ರ, ಸ್ವಾಮೀ! ನಿನ್ನ ಮನುಜೇಂದ್ರಪದದಲ್ಲಿ ದಿವಿಜೇಂದ್ರಪದವಿದೆ! ಇಲ್ಲಿಯೇ ಮುನಿಯಂತೆ ಮೋಕ್ಷಮಾರ್ಗವಿದೆ!.... ನೀನು ಹೇಗೆ ಜಾಣನೋ ಹಾಗೆಯೇ ನಿನ್ನ ಪಾತ್ರದ ಮೀನಾಕ್ಷಿಯರೂ – ಮಝು! ಮಮ್ಮಾ! — ಈ ನುಣುಪು ನೇವಣೆ ರೂಪು ರೇಖೆಗಳ ಲಾಘವವನ್ನು ಏನು ಸಾಧಿಸಿದ್ದಾರೆ!.... ಇದನ್ನು ಮಿಂಚಿನ ಕೂಡ ಸಾಧಿಸಿದರೊ! ತಂಗಾಳಿಯ ಅಂಚಿನಲ್ಲಿ ಆಡಿ ಕಲಿತರೊ! ಪಂಚಬಾಣನೊಡನೆ ಅತಿ ಸರಿ ಮಿಗಿಲು ಎಂದು ತಾಗಿದ ಅಭ್ಯಾಸದಿಂದ ಆಯ್ತೊ!.... ನೆಲದಮೇಲೆ ಇವರು ಆಡಿದ ನೃತ್ಯದ ಶೃಂಗಾರವನ್ನು ವರ್ಣಿಸಲು ನಾನೇನು ಬಲ್ಲೆ! ಗಲಗಲನೆ ಆಕಾಶದಲ್ಲಿ ಹಂಸದಂತೆ ಬರುವ ಆ ಚೆಲುವನ್ನು ವರ್ಣಿಸಲು ನಾನೇನು ಬಲ್ಲೆ!.... ಇದರಲ್ಲಿ

ವಿಚಿತ್ರವೇನು? ನೀನು ಆತ್ಮನೆನ್ನುವ ಆಕಾಶದಲ್ಲಿ ಆಡುವೆ. ನಿನ್ನ ಮಾನಿನಿಯರು ನಿನಗೆ ಸಹಚರಿಯರು ಆದ ಕಾರಣ ಆಕಾಶದಲ್ಲಿ ಬರುವುದು ಏನಾಶ್ಚರ್ಯ! ...ಮಿಕ್ಕ ರಾಜರ ಪತ್ನಿಯರು ಹೀಗೆ ಬಂದರೆ, ಅದು ಆಶ್ಚರ್ಯ! ಗಿಳಿ ಬಿಳಿದಾದರೆ ಚೋದ್ಯ ಪಡಬೇಕೇ ಹೊರತು, ಹಂಸ ಬಿಳಿಯದಾದರೆ ಆಶ್ಚರ್ಯವೇನು!....ದಿಕ್ಕನ್ಯಕಾ ನಾಟ್ಯ, ಜಲಕನ್ನಿಕಾ ನಾಟ್ಯ, ಹಂಸನುಂಡಲಿ ಇವೇ ಹೀಗಿರಬೇಕಾದರೆ – ಇನ್ನು ಅಮರಕಾಂತಾ ನೃತ್ಯ, ನಾಗಕನ್ಯಾನೃತ್ಯ, ತಾರಾಂಗನಾನೃತ್ಯ, ಸೂರ್ಯತಾಂಡವ, ಚಂದ್ರ ತಾಂಡವ ಇವುಗಳನ್ನು ಇವರು ಆಡಿದರೆ ಮತ್ತೆ ಇನ್ನೆಂತೊ!....ಮತ್ತೆ, ಪುಷ್ಪಲತಾನೃತ್ಯ, ಕಲ್ಪಲತಾನೃತ್ಯ, ಬಾಷ್ಪವಿನ್ಯಲ್ಲತಾನೃತ್ಯ, ಪುಷ್ಪಕ ನೃತ್ಯ ಇವು ಮೊದಲಾದುವನ್ನು ತೋರಿದರೆ – ಆನಂದದಿಂದ ಬಾಷ್ಪಾಂಬು ಬೀಳದಿರುವುದೆ! ...ಇನ್ನೂ ದಶಪದ್ಮಲಾಸ್ಯ, ವಿಂಶತಿ ಪದ್ಮಲಾಸ್ಯ, ಷೋಡಶ ಪದ್ಮಲಾಸ್ಯ ಮುಂತಾದ ಕುಶಲವನ್ನು ತೋರುವ ಸೊಗಸು ಹೇಗೆ – ಅದನ್ನು ಭೋಗಕುಶಲನಾದ ನೀನೇ ಬಲ್ಲೆ. ”

ಅದಕ್ಕೆ ರಾಜ ಹೇಳಿದ:

“ ಬುದ್ಧಿಸಾಗರ ಮಂತ್ರಿ! ಇದನ್ನು ಏನು ದೊಡ್ಡದೆಂದು ಇಷ್ಟು ಹೀಗೆ ಎತ್ತಿ ಕೊಂಡಾಡುವೆ? ಸ್ವಾನುಭವದ ಸುಖಕ್ಕಿಂತ ಈ ಪಾತ್ರಗಾನ ಮುಂತಾದ ಸುಖಗಳು ಎಂದಿಗಾದರೂ ಅಧಿಕವಾದಾವೆ? ...ಮುಕ್ತಿಯೆ ಸುಖ. ಅದು ಬರುವ ನಡುವೆ ವಿರಕ್ತಿಯೆ ಸುಖ. ಅದರಲ್ಲಿ ವ್ಯಕ್ತಾತ್ಮಭಾವವೆ ಸುಖ. ಮತ್ತೆ, ವಿಷಯ ಸಂಯುಕ್ತಿ ಏತರ ಸುಖ?....ಪುಣ್ಯವು ತಂದುಕೊಟ್ಟ ಸುಖವನ್ನು ಆಚೆ ತಳ್ಳದೆ, ಉದಾಸೀನದಿಂದ ಅವನ್ನು ಉಂಡುಬಿಟ್ಟು, ಭಾಸುರವಾದ ಆತ್ಮಾನುಭವದಲ್ಲಿ ಇರುತ್ತಿರುವೆನು....ಇದು ನಿನಗೆ ಗೊತ್ತಿಲ್ಲ ವೆಂದಲ್ಲ. ನೀನು ಇದನ್ನು ಬಲ್ಲೆ. ಆದರೂ ಲೋಕಾನುರಂಜನೆಗಾಗಿ ನೀನು ಹೀಗೆ ಹೊಗಳಿದೆ....ಹೋ, ನಿಲ್ಲು, ಸಾಕು. ಇನ್ನು ಉಡುಗೊರೆ ಯನ್ನು ಹಿಡಿ” ಎಂದು ಆ ನೃಪನು ಕೈನೀಡಿದನು.

“ ಬೇಡ; ಸ್ವಾಮಿ. ಮತ್ತೆ ಒಯ್ಯುತ್ತೇನೆ” ಎಂದು ಆ ಪ್ರಧಾನಿಯು ಎದ್ದು, ತಾನೆ ತನ್ನ ವಸ್ತ್ರಾಭರಣಗಳನ್ನು ಕೊಟ್ಟು ಸನ್ಮಾನಿಸಲು ನಿಂತನು. ‘ ಯಾರಿಗೂ ತೋರದ ಅಂತಃಪುರದ ನಾಟ್ಯವನ್ನು ಈ ರಾಯನು ನನಗೆ

ತೋರಿದನು. "ನನ್ನ ಮೇಲೆ ಇವನಿಗೆ ಎಷ್ಟು ಕರುಣೆ!" ಎಂದು ಆ ಮಂತ್ರಿ ನಲಿದು, ತಾನು ತೊಟ್ಟ ಕವಚವನ್ನೂ ಮೇಲಿನ ಹಚ್ಚಡವನ್ನೂ ನೋಡಿದ ಜನಕ್ಕೆ ಕೊಟ್ಟನು. ಕೊರಳ ಹಾರವನ್ನು ನಯಕಾರನಿಗೆ ನೀಡಿದನು. ಕೈಯ ಕಡಗವನ್ನು ಸಡಿಲಿಸಿ, ಅಂಚಿನ ಶಿಖರಿಣಿಯರಿಗೆಂದು ಉರುಳಿಸಿ ಬಿಟ್ಟನು; ಅವು ಗುಡುಗುಡು ಘಲುಘಲು ಗಣಗಣ ಎನ್ನುತ್ತ ಗಾಲಿಯಂತೆ ಅವರ ಬಳಿಗೆ ಹೋದುವು! ಪದಕವನ್ನು ತೆಗೆದು ನೃಪನಿಗೆ ನಿವಾಳಿಸಿ, ಅದನ್ನು ನೀವೆಸೆದು ಸೂತ್ರಧಾರನಿಗೆ ಕೊಟ್ಟನು. ಕಂಠಮಾಲಿಕೆಯನ್ನು ಕಿತ್ತು ಕೈತುಂಬ ತುಂಬಿಕೊಂಡನು; ಅದರಲ್ಲಿ ಹದಿನಾರು ಮಣಿಗಳನ್ನು ಆಯ್ದು, ಆ ಹದಿನಾರು ಪಾತ್ರಗಳಿಗೆ ನಿವಾಳಿ ತೆಗೆದು ಚೆಲ್ಲಿದನು; ಉಳಿದ ಮಣಿ ಗಳನ್ನು ರಾಜನ ಪಕ್ಕದ ತೆರೆಯಲ್ಲಿ ಮರೆಯಾಗಿದ್ದ ಅರಸಿಯರಿಗೆ ನಿವಾಳಿಸಿ ತೂರಿದನು. "ಈ ಮಂತ್ರಿಗೇನಾದರೂ ಪಿತ್ತವೇರಿತೋ" ಎಂದು ನೋಡು ವವರಿಗೆ ಎನ್ನಿಸುವ ಹಾಗೆ, ತಾನು ಉಟ್ಟು ತೊಟ್ಟದ್ದನ್ನು ತೆಗೆದು ನೀಗಿ, ಚಿತ್ರದ ಜಿನಬಿಂಬ ಸಿದ್ಧಬಿಂಬಗಳಿಗೆ ಮುತ್ತನ್ನು ಭಕ್ತಿಭಾವದಿಂದ ಚೆಲ್ಲಿದನು. ಅನಂತರ, ಅರಸನು ತನಗೆ ದಯಪಾಲಿಸಿದ ಹೊಸ ವಸ್ತ್ರಾಭರಣಗಳನ್ನು ಶೃಂಗರಿಸಿಕೊಂಡು, ತಲೆಬಾಗಿ ನೃಪನಿಗೆ ಕೈಮುಗಿದು, ಮಂತ್ರಿ ಸಭೆಯಿಂದ ಹೊರಟನು.

ಸಭೆಯೆಲ್ಲ "ಪುರೇ!" ಎಂದು ಅವನನ್ನು ಹೊಗಳಿತು.

ಬಳಿಕ ಮೇಳಸಹಿತವಾಗಿ ನಯಕಾರನು ತೆರಳಿದನು. ಮತ್ತೆ, ಆ ಗಾನಸತಿಯರೂ ತೆರಳಿದರು. ಹೊರಗಿನ ಜಯಘಂಟೆ ಠೊಣ್ಣೆಂದು ಹೊಡೆದು, ರಾತ್ರಿ ಹನ್ನೆರಡು ಘಳಿಗೆಯಾದುದನ್ನು ತಿಳಿಸಿತು.

ಅತ್ತ ಅನ್ಯರು ಹೋದರು. ಇತ್ತ ತನ್ನವರು ಇದ್ದಾರೆ. "ಈಗ ತಕ್ಕ ಮನ್ನಣೆ ಕೊಟ್ಟು ಈ ಪಾತ್ರಗಳನ್ನು ಮನ್ನಿಸೋಣ" ಎಂದು ಅರಸನು ನೆನೆದನು.

ಅನ್ಯರೆಲ್ಲರೂ ಅತ್ತ ಹೋದಮೇಲೆ ಮರೆಯಾಗಿದ್ದ [illegible] ತೆರೆ ಯನ್ನು ಹಾರನೂಕಿ, ರಾಣಿಯರೆಲ್ಲ ಅರಸನಿಗೆ ಪ್ರತ್ಯಕ್ಷವಾದರು. ತೆರೆಯಿಂದ

ಈಚೆಗೆ ಕಾಣಿಸಿಕೊಂಡ ಆ ರಾಣಿಯರ ಮೋಹನ ಅದುವರೆಗಿನ ಆ ಪಾತ್ರದವರ ಮೋಹನಕ್ಕಿಂತ ಮಿಗಿಲಾಗಿತ್ತು. ಬಗೆಬಗೆಯಾಗಿ ಅರಿತು ಸಿಂಗರಿಸಿದ ಶೃಂಗಾರ, ಮುಗಮುಗಿಸುವ ಕಂಪಿನ ಹೊಮ್ಮು, ನಗುಮುಖದ ಅರಸಿಯರು ಗುಂಪುಗುಂಪಾಗಿ ಅಧಿಕಸಂಖ್ಯೆಯಲ್ಲಿ ಸಂದಣಿಸಿದ್ದರು.

ರಾಜನು ಎಡಕ್ಕೂ ಬಲಕ್ಕೂ ಹಿಂದುಗಡೆಗೂ ತಿರುಗಿ ನೋಡಿ, " ಚಪಲಾಕ್ಷಿಯರಿಗೆ ಇಷ್ಟುಹೊತ್ತೂ ಇಲ್ಲಿ ತೆರೆಯ ಹಿಂದೆ ತುಂಬ ಉಪಸರ್ಗ ವಾಗಿತ್ತು, ಅಲ್ಲವೆ ? " ಎಂದು ಉಪಚಾರದ ಮಾತನಾಡಿದನು.

ಉಪಸರ್ಗ ಎಂದರೆ ಹಿಂಸೆ. " ಉಪಸರ್ಗವೆಂಬುದು ನಮಗೆ ಕನಸಿನಲ್ಲೂ ಇಲ್ಲ, ಅರಸೆ. ಇದು ಸ್ವರ್ಗವಾಗಿತ್ತು. ನಿನ್ನೊಡನೆ ಓಲಗ ದಲ್ಲಿರುವುದು ಯಾರಿಗೆ ತಾನೇ ಸುಖ ಕೊಡದು? ವ್ಯಾಕರಣದ ಪ್ರಕಾರ, ಸ್ವರ್ಗದ ಹತ್ತಿರಕ್ಕೆ ಉಪಸ್ವರ್ಗ ಎಂದು ಹೆಸರು. ಆದ್ದರಿಂದ ಉಪಸರ್ಗ ವೆನ್ನಬೇಡ. ಉಪಸ್ವರ್ಗವೆನಬೇಕು. ಲಿಪಿಯ ಕೆಳಗೆ ಒತ್ತು ತಪ್ಪಿತು. ನರ್ತನಮಾಡಿ ಪಾತ್ರದ ಅಂಗನೆಯರಿಗೆ ಪ್ರೀತಿಯಾಯಿತು. ನೋಡಿ ನಮಗೆ ಸಂತೋಷವಾಯಿತು. ಇದು ಸ್ವರ್ಗದ ಸಮೀಪವಲ್ಲವೆ, ನೋಡು ! " ಎಂದು ಅವರು ಮಾತಾಡಿ ಪತಿಯನ್ನು ಮೆಚ್ಚಿಸಿದರು.

" ದೊರೆಯೆ, ಆ ಪಾತ್ರಸತಿಯರು ಬಳಲಿದ್ದಾರೆ. ಅವರನ್ನು ಕರೆದು ಮನ್ನಿಸು " ಎಂದರು, ಆ ರಾಣಿಯರು.

" ಬನ್ನಿ, ಪಾತ್ರಕಾಂತೆಯರಿರಾ ! " ಎಂದು ಆ ರಾಯನು ಅವರನ್ನು ಬಾಯಾರೆ ಕರೆದನು.

ಆ ಚೆನ್ನೆಯರು ಆನಂದದಿಂದ ಬಂದು ಅವನ ಸನ್ನಿಧಿಯಲ್ಲಿ ನಿಂತರು. ಬೆವರಿನ ಕಿರುಹನಿಯ ಮೈ, ಸ್ವಲ್ಪ ಕದರಿದ ಬೊಟ್ಟು, ಮಿರುಮಿರುಗುವ ಮುಖಕಾಂತಿ. ಹೊರಹೊಮ್ಮುವ ಒಂದು ಹೊಸರೀತಿಯ ಮೈಗಂಧ-ಮೆರೆದು ಬಂದು ನಿಂತರು. ಕಿಡಿ ಕೆದರುವ ಕೆಂಪುಬಾಯಿ, ಮಿಂಚು ಏಳುವ ಕಣ್ಣು, ನಸುಹೊಯ್ಯುವ ಅಳ್ಳೆ, ಸ್ವಲ್ಪವೇ ಹೆಚ್ಚಿದ ಉಸುರು, ವಿಶಾಲವಾದ ಹಣೆಯ ಮೇಲೆ ನುಣುಪಾದ ಕುರುಳ ಸಾಲು — ಬೆಡಗಿನಿಂದ ಬಂದು ನಿಂತರು. ಮೈಯನ್ನು ಸವರಿಸುತ್ತ, ರಾಜನ ಮುಖವನ್ನು ನಗೆಗಣ್ಣಿಂದ ನೋಡುತ್ತ,

ಕಾಸೆಯ ಸೆರಗಿನಿಂದ ಬೆವರನ್ನು ತೊಡೆಯುತ್ತ — ಚೆಲುವಾಗಿ ಬಂದು ನಿಂತರು.

ಅರಸನು ಆ ಸತಿಯರನ್ನು ಮುಖದಿಂದ ಕೈಕಾಲುಗಳವರೆಗೂ ನೋಡಿ, ಗಂಡುಗೋಗಿಲೆ ತುಟಿ ತೆರೆಯುವಂತೆ, ಎಳನಗೆಯನ್ನು ಮಿನುಗಿಸುತ್ತಾ ಹೇಳಿದನು :

" ಭಾಪು, ಪ್ರಚಂಡೆಯರಿರ ! ಈ ದಿನ ಮಹಾ ಸಮರ್ಥವಾಗಿ ನಾಟ್ಯ ಮಾಡಿದಿರಿ. ಆದಿಜಿನನ ಆಣೆಗೂ ಅತಿ ಅಪೂರ್ವವಾಯಿತು ! ಮಹಾ ಪರಿಣಾಮವಾಯಿತು !....ಬುದ್ಧಿಸಾಗರನು ಇರುವನೆಂಬುದನ್ನು ಅರಿತು ನಾಟಕವನ್ನು ವೃದ್ಧಿಮಾಡಿದಿರಿ. ಮನಸ್ಸಿನ ಜಾಡ್ಯಗಳೆಲ್ಲ ಎದ್ದುಹೋದುವು. ನಿಜವಾಗಿ, ನೀವು ತುಂಬ ಬುದ್ಧಿಶಾಲಿಯರು !"

" ಬುದ್ಧಿಸಾಗರನನ್ನು ಕಂಡು ನಮಗೇನು ಗೊಡವೆ, ಸ್ವಾಮಿ ? ನಾವು ಬುದ್ಧಿಸಾಗರನ ಒಡೆಯನ ಮುಂದೆ ತಾಂಡವ ಪದ್ಧತಿಯನ್ನು ತೋರಿದೆವು." ಎಂದರು, ಅವರು.

" ಇಲ್ಲ, ಇಲ್ಲ. ಹಂಸಮಂಡಲಿಯನ್ನು ತೋರುವಾಗ, ಅಲ್ಲಿಗೆ ಒಬ್ಬಳನ್ನು ಮರೆಯಾಗಿ ಒಡ್ಡಿ, ಮೆಲ್ಲನೆ ನೀವೆಲ್ಲ ನೋಡಲಿಲ್ಲವೆ ? ನನ್ನೊಡನೆ ನಿಮಗೆ ಹುಸಿಮಾತೇಕೆ ?"

" ಅದಕ್ಕೇನು ? ನಮ್ಮ ಅನುರಾಗ ಪರರಿಗೆ ಕಾಣದ ಹಾಗೆ ಆ ಮುದುಕನಿಗೆ ಒಬ್ಬಳನ್ನು ಮರೆಮಾಡಿ, ಚದುರಿಂದ ನಟಿಸಿದೆವು. ಇದರಲ್ಲಿ ನಮಗೆ ಏನು ಕೊರತೆ ?"

"ಅವನು ಇದ್ದನೆಂಬ ಯೋಚನೆ ಸ್ವಲ್ಪವಾದರೂ ಆಗಲಿಲ್ಲವೆ, ನಿಮಗೆ? ನೆಪ ನೆಪ್ಪು ಇವು ಯಾವುವೂ ಬೇಡವೆ ? ನಿಜ ಹೇಳಿ."

" ಯೋಚನೆ ಉಂಟು, ಉಂಟು. ದೊರೆಯ ಸಮೀಪದಲ್ಲಿ ಆತ ನಾಟಿಕೊಂಡಿರುವಾಗ, ಕುಲಸತಿಯರಿಗೆ, ದಾಟಿ ನರ್ತಿಸುವ ನಾಟಕದಲ್ಲಿ ಯೋಚನೆಯುಂಟಾಗದಿರುವುದೆ ? ನಾಟಕವೆಂಬುದು ಗಂಭೀರಕಲೆಯಲ್ಲ. ಅದನ್ನು ಆಡಿ, ಅನ್ಯಜನದ ನೋಟಕ್ಕೆ ತರುವಾಗ, ಕುಲವಧುಗಳಿಗೆ ಯೋಚನೆಯಿರುವುದಿಲ್ಲವೆ ? ಒಂಟಿಯಾಗಿ ದೇವರು ಎಂದೆಂದು ನೋಡಿದರೂ ಅಡ್ಡಿ ಆತಂಕವಿಲ್ಲದೆ ನಟಿಸುವೆವು. ಮಂಟಪದಲ್ಲಿ ಮಂತ್ರಿ ಇದ್ದುದರಿಂದ ನಮಗೆ

ಚಿಂತೆ ಗಂಟಿಕ್ಕಿತು. ವನಿತೆಯಾದವಳು ತನ್ನ ಪುರುಷನಿಗಾದರೂ ಮೈಯ್ಯ ಅಂಗವನ್ನು ತೋರದೆ ಸವರಣೆಯಿಂದ ನರ್ತಿಸಬೇಕು. ಅಂಥದ್ದರಲ್ಲಿ, ಪರರ ಮುಂದೆ ನರ್ತಿಸುವಾಗ ಮೈಗೆ ಮರೆ ಬೇಡವೆ, ದೊರೆಯೆ? ಅದರ ಮೇಲೋ — ನೀನು ಅತಿ ಜಾಣ, ನಿನ್ನ ಮೋಹದ ಮಂತ್ರಿ ತಾನು ವಿವೇಕಿ; ಅದ್ದರಿಂದ ಎಚ್ಚತ್ತು ನಟಿಸಿದೆವು. ನೀನು ಕಂಡದ್ದು ತಪ್ಪದೆ ಶೀಘ್ರವು."

"ಚೆನ್ನಾಗಿ ಹೇಳಿದಿರಿ. ಚೆನ್ನಾಗಿ ಹೇಳಿದಿರಿ. ನಿಮ್ಮ ನಡತೆಗೆ ನಾನು ಮೆಚ್ಚಿದೆ. ಬೇಸರವಿಲ್ಲದೆ ಬೇಡಿರಿ. ನಿಮ್ಮ ಇಚ್ಛೆಯೇನೋ ಅದನ್ನು ತಪ್ಪದೆ ಕೊಡುತ್ತೇನೆ."

ನಮಗೆ ಒಂದು ವಸ್ತುವಾದರೂ ಬೇಕೆಂಬ ಆಸೆಯಿಲ್ಲ; ಅರಸೆ, ಸರ್ವಭಾಗ್ಯವೂ ನಮಗೆ ಮೊದಲೇ ಇದೆ. ಲವಲವಿಕೆಯಿಂದ ಅನುದಿನವೂ ಹೀಗೆಯೇ ನಲಿಯುವ ಅನುಭವವೊಂದೇ ಸಾಕು, ನಮಗೆ."

"ಇವಳನ್ನು ಕೇಳು. ಅವಳನ್ನು ಕೇಳು. ಈಕೆಗೇನು ಬೇಕು? ಆಕೆಗೇನು ಇಷ್ಟ?" ಎಂದು ಆ ಹದಿನಾರು ಪಾತ್ರಗಳನ್ನೂ ಒಬ್ಬೊಬ್ಬರನ್ನಾಗಿ ನೋಡುತ್ತ ಬಂದರೆ — ಏನು ಇದು ವಿಚಿತ್ರ! ಇಬ್ಬರು ಅಲ್ಲಿ ಇಲ್ಲ!

೧೦

"ಹದಿನಾಲ್ವರು ಇದ್ದಾರೆ. ಇನ್ನಿಬ್ಬರು ಇಲ್ಲ!" ಎಂದು ಎಲ್ಲರೂ ಎದೆಹಾರುಗೊಂಡು, ಬೆದರಿದಂತೆ ಅತ್ತಿತ್ತ ನೋಡಿದರೆ — ಹಿಂದೆ ಕಂಬದ ಮರೆಯಲ್ಲಿ ಇದ್ದರು, ಆ ಇಬ್ಬರು!

ರೂಪಾಣಿ, ಪದ್ಮಿನಿ ಎಂಬುವರು ಅವರಿಬ್ಬರೂ ಅರಸನ ಮೇಲೆ ಇಷ್ಟು ಮುನಿಸು ಮಾಡಿಕೊಂಡು, ಕೋಪದಿಂದ ಹತ್ತಿರಕ್ಕೆ ಬರದೆ ದೂರದಲ್ಲಿದ್ದರು. ತಾವು ಆಡುವಾಗ, ಅರಸನು ಸುಮ್ಮ ಮುಖವನ್ನು ಅಡ್ಡಮಾಡಿದನೆಂಬ ನೋವಿನಿಂದ, ನೃತ್ಯವನ್ನು ಆಡಿ ಮುನಿದು, ಜೊತೆಗೆ ಬಾರದೆ, ದೂರ ನಿಂತರು. ತಮ್ಮ ನೃತ್ಯವನ್ನು ನೋಡುತ್ತ, ಅರಸನು ಒಮ್ಮೆ ಮೇಲೆಯ ಕ್ಕಾಗಿ ಹೆಣ್ಣುಮಕ್ಕಳ ಕಡೆಗೂ, ಒಂದೆರಡು ಸಲ ಮಂತ್ರಿಯ ಕಡೆಗೂ ತಿರುಗಿದುದಕ್ಕೆ ತುಂಬ ದುಃಖಪಟ್ಟು ದೂರ ನಿಂತರು.

ತಾವು ಒಬ್ಬರೊಬ್ಬರನ್ನು ನೋಡದೆ, ನಗದೆ, ಮಾತಾಡದೆ, ಕಂಬವನ್ನು ಒರಗ್ಗಿ, ಜೋಡಿಪುತ್ಥಳಿಯಂತೆ ನಿಂತಿದ್ದ ಅವರ ಚಿಂತೆಯ ಗಾಢವನ್ನು ಆ ರಾಯನು ಕಂಡನು.

ಇದು ಸ್ತ್ರೀಯರಿಂದ ಆದ ನೋವೊ? ಅಥವಾ, ನಮ್ಮಿಂದ ಆದದ್ದೊ? ಮತ್ತೇಕೆ ಮುನಿದು ದೂರ ನಿಂತರು? ತಿಳಿಯೋಣ" ಎಂದು ರಾಯನು ಅನುಮಾನಿಸುತ್ತ, "ಕರೆ, ಕರೆ! ತಾವಿಬ್ಬರೇ ಏಕೆ ಆಕಡೆ ನಿಂತರು?" ಎಂದು ಅರಸನು ತನ್ನ ಸೇವಕಿಯರನ್ನು ಕಳುಹಿದನು.

"ಸ್ವಾಮಿ ನಿಮ್ಮನ್ನೂ ಬರಹೇಳುತ್ತಾರೆ. ಬನ್ನಿ" ಎಂದು ಅವರು ಕರೆದರು

ಅದಕ್ಕೆ ಅವರು "ಹೋಗಿ, ಹೋಗಿ. ನಿಮ್ಮ ಸ್ವಾಮಿಯ ದೃಷ್ಟಿಗಳಿಗೆ ನಮ್ಮ ಲಾಘವದ ನರ್ತನ ಸೊಗಸಲಿಲ್ಲ. ಆಗು ಕೇಳ್ಪನವನ್ನು ಕರೆಯುವುದು ಏಕೆ?" ಎಂದು ಅವರು ರಾಜನಿಗೆ ಕೇಳಿಸುವಂತೆಯೇ ಉತ್ತರಕೊಟ್ಟರು.

"ನಮ್ಮ ಆಟ ನಿಮ್ಮ ಒಡೆಯನಿಗೆ ಸೊಗಸಲಿಲ್ಲ. ಈ ಹೆಡ್ಡ ಹೆಣ್ಣುಗಳ ನೃತ್ಯವೇನು ಎಂದು ಅಡ್ಡಮೋರೆಮಾಡಿ, ಮಂತ್ರಿಯ ಗಡ್ಡವೊಂದನ್ನೇ ನೋಡುತ್ತಿದ್ದ. ಜಡಪಾತ್ರವೆಂದು ನಮ್ಮ ಕಡೆ ನೋಡದೆ, ತನ್ನ ಎಲಡಿಕೆಯ ಹೆಣ್ಣುಗಳನ್ನೇ ನೋಡುತ್ತಿದ್ದ. ಈಗ ಬರಿಯ ಬಣ್ಣಗಾರಿಕೆಗೆ ಕಡೆಗೆ ಕರೆಸಿದರೆ, ನಾವು ಹೇಗೆ ಬರಬಹುದು? ಊಳಿಗದ ಹೆಣ್ಣುಗಳ ಹತ್ತಿರ ನಮ್ಮ ದುಃಖವನ್ನು ಹೇಳಿಕೊಂಡರೆ, ನೀವೇನು ಮಾಡೀರಿ? ಹೋಗಿ, ಬಾಲೆಯರೆ: ನಾವು ಬರುವುದಿಲ್ಲ" ಎಂದು ರಾಜನ ಕಿವಿಗೆ ಬೀಳುವಂತೆಯೇ ಹೇಳಿದರು.

"ಓಹೊ! ನನ್ನಿಂದಲೇ ಇವರಿಗೆ ನೋವಾಯಿತು" ಎಂದು ಅರಸನು ತಿಳಿದು, "ಇನ್ನು ಇವರ ಮುನಿಸನ್ನು ತಿಳಿಸುವ ಉಪಾಯವಾವುದು?" ಎಂದು ಚಿಂತಿಸಿ ನೆನೆದನು

"ಬಾರಾ, ರೂಪಾಣಿ,! ಬಾರೌ, ಪದ್ಮಿನಿ! ಹತ್ತಿರ ಬನ್ನಿ. ನಿಮ್ಮ ಮನಸ್ಸಿನ ತಾಪವನ್ನು ಹೋಗಲಾಡಿಸುತ್ತೇನೆ?" ಎಂದು ಗದ್ದುಗೆಯ ಬಳಿಗೆ ಕರೆದನು.

ಅದಕ್ಕೆ ಅವರು "ದೇವ, ನೀನು ನಮ್ಮನ್ನು ಏಕೆ ಕರೆಯುವುದು? ನಾವು ನಿನ್ನ ಚಿತ್ತಕ್ಕೆ ಬರುವ ಪಾತ್ರಗಳೆ? ಯಾವ ಮೋರೆಯಿಂದ ನಿನ್ನ ಬಳಿಗೆ ಬಂದೇವು?" ಎಂದು ನೋವಿನಿಂದಲೇ ನುಡಿದರು.

"ಕಣ್ಣಿಗೆ ಇಚ್ಚೆಯಾದರೆ, ಮನಸ್ಸಿಗೆ ಇಚ್ಚೆಯಾಗುವುದು. ಕಣ್ಣಿಗೆ ಇಚ್ಚೆಯಾಗದ ನಮ್ಮನ್ನು ಈಗ ಬರಿಯ ಬಣ್ಣಗಾರಿಕೆಗೆ ಕರೆವುದು ಏಕೆ?" ಎಂದರು.

"ಕೇಳಿ: ನಿಮ್ಮ ನೃತ್ಯವನ್ನು ನೋಡುವಾಗ ನಾನು ಆಲಸ್ಯಪಟ್ಟವನಲ್ಲ. ವೀಳೆಯವನ್ನು ಕೊಳ್ಳುವುದಕ್ಕಾಗಿ ಒಮ್ಮೆ ಮುಖ ತಿರುವಿದರೆ, ನೀವು ಇಷ್ಟು ನೋವುಗೊಳ್ಳಬಹುದೆ? ಎದುರಿಗಿದ್ದ ಮಂತ್ರಿಯನ್ನು ಒಮ್ಮೆಯೂ ನೋಡದೆ, ನಿಮ್ಮನ್ನೇ ನಾನು ನೋಡುತ್ತಿದ್ದರೆ, 'ಹೆಮ್ಮಕ್ಕಳನ್ನೇ ನೋಡುತ್ತಿದ್ದಾನಲ್ಲ, ಈ ಅಧಿಕಕಾಮಿ!' ಎಂದು ಮಂತ್ರಿ ಎಂದುಕೊಳ್ಳದಿರುವನೆ? ನನಗೆ ನಿಮ್ಮಲ್ಲಿ ಪ್ರೀತಿಯುಂಟೆಂಬುದನ್ನು ಎಲ್ಲರ ಎದುರಿಗೂ ಕಾಣಿಸಬೇಕೆ! ಕಲ್ಲೆದೆಯವರಂತೆ ಹೀಗೆ ಮುನಿದು ಕಾಡಿಸುವುದು ಇದು ತಿಳಿದವರ ತೆರನೆ, ನೋಡಿ!"

"ಮಾತನಾಡಿ, ನಮಗೆ ಆಸೆ ತೋರಬೇಡ, ರಾಯ. ನಾವೂ ನಿನ್ನೊಡನೆ ಆಡಿದವರು. ಬಿಡು, ಬಿಡು. ಮೊದಲು ನಮ್ಮ ಪಾತ್ರವನ್ನು ಎಡಹಿಬಿಟ್ಟು, ಈಗ ವರ್ಣಿಸುತ್ತೀಯೇನು? ಉತ್ತರನಾಟಕಕ್ಕೆ ಒಪ್ಪುವ ಗಂಭೀರವೃತ್ತದ ನಾಟ್ಯವಾಡಿದ ನಮ್ಮನ್ನು ರಚ್ಚೆಯ ಪೂರ್ವನಾಟಕದವರಂತೆ ಕಂಡರೆ, ಕೋಪಬರದೆ ಮತ್ತೇನು? ನಾವೇನು ಕೊರವಂಜಿ ಕಟ್ಟಣೆಯಂಥ ತಿರುಕವೇಷವನ್ನು ತಾಳಿದೆವೆ? ಅಥವಾ, ಕೊಡಲಿ ತಮಟೆಗಳನ್ನೂ ಕತ್ತಿ ಗುರಾಣಿಗಳನ್ನೂ ಹಿಡಿದು, ಹೆಣ್ಣುವೇಷವನ್ನು ಬಿಟ್ಟು ಗಂಡುವೇಷವನ್ನೇನಾದರೂ ಹಾಕಿ ಬಂದೆವೆ? ಬೇಡ, ಬೆಳ್ಳಕ್ಕಿಗೆ ಬಲೆಬೀಸಿ, ತನ್ನ ಕೈಯಿಂದ ತನ್ನ ಅಳ್ಳೆಯನ್ನೂ ತನ್ನ ಬಾಯನ್ನೂ ಸೊಯ್ದುಕೊಂಡು, ಘೊಳ್ಳನೆ ಎಲ್ಲರನ್ನೂ ನಗಿಸುವ ಕೊರಮರ ವೇಷ ಕಾಣಿಸಿದೆವೆ? ಇಲ್ಲ, ಭಂಗಿಯನ್ನು ತಿಂದಂತೆ ತೂಕಡಿಸುತ್ತ, ಮತ್ತೆ ಕಣ್ಣುಗಳನ್ನು ಮುಚ್ಚಿ ತೆರೆಯುತ್ತ, ಕಂಥೆಯ ಜೋಗಿಣಿಯಂತೆ ನಾಟ್ಯವಾಡಿದೆವೆ ನಾವು?....ನಾವೂ ಆಗಲೇ ಆಚೆ ಸರಿದು ನಿಂತುಬಿಡುತ್ತಿದ್ದೆವು. ಏನೋ ಬುದ್ಧಿಸಾಗರಸಿದ್ಧನಾಗಿ,

ಹೋಗಲಿ ಎಂದು ಗಂಭೀರದಿಂದ ನಟಿಸಿದೆವು. ಈಗ ನಿನ್ನ ಆಟ ಸಾಕು, ಅರಸ."

"ಬೇಡ; ನೀವು ನನ್ನ ಮೇಲೆ ಇಷ್ಟು ಕೋಪ ಮಾಡುವುದಕ್ಕೆ ನಾನು ನಿಮಗೆ ಮಾಡಿದ ದೋಷವೇನು? ಸುಮ್ಮನೆ ನನ್ನನ್ನು ಕಾಡುವುದು ಉಚಿತವೆ?"

"ಅಬ್ಬ! ಎಲ್ಲಿ ಕಲಿತೆಯೋ! ಎದೆಯಲ್ಲಿ ಕಠಿನ, ನುಡಿಯಲ್ಲಿ ಮಾರ್ದವ! ನಿನ್ನ ನುಡಿಯಿಂದ ನೀನು ಕಲ್ಲನ್ನೂ ಕರಗಿಸುವೆ. ಅದನ್ನು ನಾವು ಬಲ್ಲೆವು. ಸಾಕು, ಸುಮ್ಮನಿರು. ಆಡುವಾಗ ನಮ್ಮನ್ನು ಉದಾಸೀನ ಮಾಡಿ, ಈಗ 'ಬೇಡ. ಬನ್ನಿರಿ. ನೀವು ನನ್ನನ್ನು ಕಾಡುವುದು ಉಚಿತವೆ?' ಎಂದು ನಮ್ಮನ್ನೇ ಕಾಡುತ್ತಿದ್ದಾನೆ, ಅಮ್ಮಾ!"

"ಹೌದು. ನಿಮಗೆ ನೋವಾಯಿತು. ನಾನು ನಿಮ್ಮನ್ನು ನೋಯಿಸಿದೆ. ಆ ನೊಂದ ನೋವನ್ನು ನೀಗಿಸುತ್ತೇನೆ. ಇತ್ತ ಬನ್ನಿ. ನೀವು ಏನು ಕೇಳಿದರೂ ಕೊಡುತ್ತೇನೆ."

"ಅಯ್ಯಯ್ಯೋ! ನಮ್ಮನ್ನು ಯಾರೆಂದು ಕಂಡೆಯೊ! ನಾವೇನು ಕೀಳಾಸೆಯವರೆ? ಪ್ರಿಯಾಸೆ ನಮಗಿಲ್ಲ. ಮಹಿಮನ ವಂದನೆಯನ್ನು ಕೈಯಲ್ಲಿ ಹೊಂದಿರುವೆವು, ಕಾಣಾ. ನೀನು ಕೊಡುವುದೇನು, ನಾವು ತೆಗೆದುಕೊಂಬುದೇನು! ಅಭಿಮಾನ ತಪ್ಪಿದ ಮೇಲೆ ಹೀನವಸ್ತ್ರಗಳಾದರೇನು, ಆಭರಣಗಳಾದರೇನು? ಈ ಕಲ್ಲು ಲೋಹ ಇವೆಲ್ಲ ಏನು ದೊಡ್ಡದು? ಗುಣವೇ ಭೂಷಣ, ಅಭಿಮಾನವೇ ವಸ್ತ್ರ ಎಂದು ಎಣಿಸಿ ಕೈಹಿಡಿದಿರುವ ನಮಗೆ ಈ ವ್ಯರ್ಥವಾದ ತೊಡಿಗೆಗಳ ಆಸೆ ತೋರಿ ಕರೆಯಬೇಡ."

—ಎಂದು ಒಕ್ಕಣಿಸಿ ಅವರಿಬ್ಬರೂ ಅಲ್ಲೇ ದೂರದಲ್ಲೆ ಇದ್ದರು.

## ೧೧

"ಹೋಗು, ಚಂದನವತಿ! ಹೋಗು, ಮಂಗಲವತಿ! ನೊಂದ ಹೆಣ್ಣುಗಳನ್ನು ಕರೆದು ತನ್ನಿರಿ. ಇಂದಿನ ನೋವನ್ನು ಮರೆತರೆ, ಮುಂದೆ ನೀವೆಂದ ಹಾಗೆ ನಡೆಯುತ್ತೇನೆ" ಎಂದು ರಾಜ ಹೇಳಿದ.

"ಹೌದು, ಹೌದು, ದೇವ. ತಪ್ಪದೆ, ಖಂಡಿತವಾಗಿ! ಅದೇ ಸರಿ!"

ಎಂದು ಅವರು ಬಂದು, "ರಾಜನೆಂಬುದಕ್ಕೆ ಒಂದುಬಾರಿ ಸೈರಿಸಿ ಬನ್ನಿ. ಆಗ್ರಹ ಬೇಡ" ಎಂದು ಕರೆದರು.

ಅದಕ್ಕೆ ಅವರು "ಅಕ್ಕ, ನೀವೇಕೆ ಬಂದಿರಿ? ನಮಗೆ ಖಂಡಿತವಾಗಿಯೂ ನಿಮ್ಮ ದೆಸೆಯಿಂದ ನೋವಾಗಲಿಲ್ಲ. ನಮ್ಮನ್ನು ಲೆಕ್ಕಕ್ಕೆ ತಾರದ ಈ ನೃಪನ ಬಳಿಗೆ ನಮ್ಮನ್ನು ಕರೆಯುವುದು ತರವೆ?" ಎಂದರು.

"ಹಾಗಲ್ಲ, ತಂಗಿಯರಿರ: ಬನ್ನಿ. ದೊರೆಯೊಮ್ಮೆ ವೈಮನಸ್ಯವನ್ನು ತೋರಿ ಕರೆದರೆ, ನಮ್ಮ ಕೋಪವನ್ನು ಹಿಂಗಿಸಬೇಕು. ಇದು ರಾಜನ ನೃತ್ಯದ ಅಂಗನೆಯರಿಗೆ ಗುಣ."

"ಆ ಗುಣ ನಮಗೆ ಆಗುವುದು, ಅಕ್ಕ. ನಮಗೆ ಕೋಪ ಹೋಗದು. ನೀವು ನಮ್ಮ ಮೇಲೆ ಬೇಸರಮಾಡಬೇಡಿರಿ. ನೀವು ಹಿರಿಯರು, ಹೋಗಿ ಬನ್ನಿ"

— ಎಂದು ಕೈಮುಗಿದು ಅವರನ್ನು ಕಳುಹಿದರು.

"ಸುವರ್ಣಾಣಿ! ಪುಷ್ಪಾಣಿ! ಕಟ್ಟಾಣಿ! ನೀವು ಒಪ್ಪದಿಂದ ಹೋಗಿ ಅವರನ್ನು ಕರೆತನ್ನಿ. ಸುಪ್ರೀತಿಗೆಯನ್ನು ನೋಕಿದ ಹಾಗೆ, ಅವರಿಗೆ ಮುಂದೆ ಲೇಸಾಗುವಂತೆ ನಡಸಿಕೊಡುತ್ತೇನೆ." ಎಂದ, ದೊರೆ.

ಅವರು ಮೂವರು ಬಂದು ಕರೆದರು. ಕರೆದರೇನು? ಅವರಿಗೂ ಅದೇ ವಿನಯವನ್ನು ನುಡಿದು, ರಾಜನ ಕಡೆಗೆ ಕಳಿಸಿದರು. ಏನವರ ಗಂಭೀರವೋ! ಏನವರ ಮುನಿಸೋ!

ಚೂಡಾಣಿ, ಮಕರಾಣಿ, ಮುಕುರಾಣಿ, ಮಿಂಚಿನಿ, ಹಂಸಿನಿ, ಮಧುರಾಣಿ, ಕುರುವಿಂದಾಣಿ – ಒಬ್ಬೊಬ್ಬರೂ ಬಂದು ಮಾತನಾಡಿಸಿ, ಹಿಂದಿರುಗಿದರು. ಮತ್ತೆ ಚಂದ್ರಾಣಿ ಮಂದ್ರಾಣಿಯರು ಬಂದು, "ಸ್ವಾಮಿಯು ಇಷ್ಟು ಕರೆಯುವಾಗ ಹೀಗೆ ಸಿಡುಕಿಕೊಂಡಿರಬಾರದು. ಬನ್ನಿ" ಎಂದು ಮೆತ್ತಗೆ ಕರೆದರು.

ಅದಕ್ಕೂ ಅವರು ಬಾರದೆ ಇದ್ದುದನ್ನು ಕಂಡು, ರಾಣಿಯರೆಲ್ಲರೂ ಕೆದರಿ ಕೆಕ್ಕಳಿಸಿ, "ಅಬ್ಬಾ! ಈ ಪಾತ್ರಕಾಂತೆಯರಿಗೆ ಏಕೆ ಇಷ್ಟು ಸೊಕ್ಕೆ?" ಎಂದು ತಮ್ಮತಮ್ಮಲ್ಲೇ ಮಾತನಾಡಿಕೊಂಡು ಕೋಪಿಸಿದರು. "ಸ್ವಾಮಿಯು ವಿನಯದಿಂದ ಕರೆಯುವುದೇನು! ಏಕೆ? ನೀವು ಈ ಮುನಿಸನ್ನು ಮುಂದು

ಮಾಡಿ ಮುರುಕುತ್ತಿರುವುದೇನು! ತಮ್ಮತಮ್ಮಲ್ಲಿ ತಮಗೆ ವಿನಯ! ಸ್ವಾಮಿಯ ಇದಿರಿನಲ್ಲಿ ಈ ಹೆಮ್ಮೆಯೇ! ಇವನ್ನು ಕಂಡು ನಾವು ಸುಮ್ಮ ನಿರುವುದೆ!" ಎಂದುಕೊಂಡರು.

ಅಷ್ಟರಲ್ಲಿ ರೂಪಾಣಿ ಅಂಜಿ, "ಇಷ್ಟು ಜನರ ಕೂಡೆ ಕಷ್ಟವೇಕೆ? ಇಷ್ಟರಾದವರ ಮಾತು ಕೇಳಬೇಕು" ಎಂದುಕೊಂಡು, ಅರಸನ ಬಳಿಗೆ ಬಂದಳು.

ಚಂದ್ರಾಣಿ ಮಂದ್ರಾಣಿಯರು ಅವಳನ್ನು ಕರೆತಂದು, 'ರಾಜೇಂದ್ರನಿಗೆ ನಮಿಸು' ಎಂದರು. "ತಪ್ಪಾಯಿತು, ಸ್ವಾಮಿ. ತಡಮಾಡಿದ ತಪ್ಪು ನನ್ನದು" ಎಂದು ಆ ಚಂದ್ರವದನೆ ಕಾಲಿಗೆ ಎರಗಿದಳು.

ಕಾಲಿಗೆ ಎರಗಿದ ನಲ್ಲೆಯನ್ನು ಮೆಲ್ಲನೆ ಹಿಡಿದೆತ್ತಿ, ಆ ರಾಯನು ಬಿಗಿದಪ್ಪಿಕೊಂಡು, "ಕಾದಲೆ, ನಿನ್ನನ್ನು ನೋಯಿಸಿದೆ, ನಿಜ. ಆ ದೊಡ್ಡ ನೋವನ್ನು ನೀನು ಮರೆತುಬಿಡು" ಎಂದನು.

ರಾಜೇಂದ್ರನ ತೋಳುಗಳಲ್ಲಿ ಸಿಕ್ಕಿ, ಅವಳು ಮೊಲೆಗಟ್ಟು ಒಡೆಯು ವಂತೆ ಹಿಗ್ಗಿದಳು. ನಟಿಯ ಮುನಿಸು ಆಗಲೇ ಬಿಟ್ಟೋಡಿತು. ಪುಟವಿಟ್ಟ ಹಾಗೆ ಪಕ್ಕದಲ್ಲಿ ಎದ್ದು ನಿಂತಳು.

೧೨

"ರೂಪಾಣಿ ಬಂದಳು. ಪದ್ಮಿನಿ ನಿಂತಳು. ಇನ್ನು ಆ ಹೆಣ್ಣಿನ ಮುನಿಸನ್ನು ತಿಳಿಸುವುದು ಹೇಗೆ?" ಎಂದು ರಾಜನು ಎಣಿಸುತ್ತಿರು ವಷ್ಟರಲ್ಲಿ—

"ಪದ್ಮಿನಿ ಏಕೆ ಬಾರದೆ ಅಲ್ಲೇ ನಿಂತಳು? ಈ ಕಷ್ಟಗುಣವನ್ನು ಎಲ್ಲಿ ಕಲಿತಳೊ? ಸಾಕಿನ್ನು. ಬಾರೆ, ಹೆಣ್ಣೆ!" ಎಂದು ಅರಸಿಯರು ಅವಳಿಗೆ ಸನ್ನೆಮಾಡಿದರು.

"ಹೌದಮ್ಮ. ನಾನು ಕೆಟ್ಟಗುಣದವಳು ಇಲ್ಲಿರುತ್ತೇನೆ. ನೀವು ಅಲ್ಲಿ ಇರಿ. ಸಾಕು ನಿಮ್ಮಾಟ. ಎಲ್ಲರೂ ಒಂದಾಗಿ, ಒಬ್ಬಳನ್ನು ಗದರಿಸಿ. ಅರಸನಿಗೆ ಹಿತವಾಗಲಿ. ಅರಸನು ಉದಾಸೀನಮಾಡಿದರೆ, ಅರಸಿಯು ರಾದರೂ ನನ್ನವರಾಗಿರುತ್ತಾರೆ, ಎಂದಿದ್ದೆ. ನೀವೂ ನಿಮ್ಮ ಅರಸನ

ಹಾಗೆಯೇ ಆದಿರಿ, ಅಕ್ಕ!........ಎಳಿ ಎಂಬ ರಾಯಸಿಗೆ ತುಳಿ ಎಂಬ ಮಂತ್ರಿ – ಎಂದು ಒಂದು ಗಾದೆ. ಅದು ನಿಮ್ಮಲ್ಲಿ ಚೆನ್ನಾಗಿ ಫಲಿಸಿತು........ ಕಡಲನ್ನು ಒತ್ತದೆ, ಕಡಲ ನೀರನ್ನು ತುಂಬುವ ಕೊಡವನ್ನು ಒತ್ತುವ ಹಾಗೆ, ಬಲುದೊಡ್ಡನೃಪನಾದ ಇವನನ್ನು ಒತ್ತದೆ ನನ್ನನ್ನು ಒತ್ತುವ ಬೆಡಗು ತುಂಬಾ ಚೆನ್ನಾಗಿದೆ!"

"ಅವಕ್ಕಲ್ಲವೆ, ತಾಯಿ. ಸುಖಿಗಳಿಗೆ ಮುನಿಸು ಮಿತಿಮೀರಿದರೆ ಸೊಗವಲ್ಲ. ನಾಯಕನಿಗೆ ಅತಿಚಿಂತೆಯನ್ನು ತೋರಬೇಡವೆಂದು ನಿನಗೆ ಸಹಾಯವಾದೆವು, ಅಷ್ಟೆ. ಬಡಮುನಿಸಾದರೆ, ಅದು ಹದನಾಗಿ ಕಾಸಿ ಹಾಲು ಕುಡಿವಂತೆ ಮೆರೆಯುವುದು. ಅದೇ ಮುನಿಸು ತುಂಬ ಹೆಚ್ಚಿದರೆ, ಅಡಿಹತ್ತುವ ಹಾಗೆ ಕಾಸಿದ ಹಾಲನ್ನು ಕುಡಿಯುವ ರೀತಿಯಲ್ಲವೆ, ತಂಗಿ?.... ಅತಿಯಾಗಿ ತಿಕ್ಕಿದರೆ, ಶ್ರೀಗಂಧದಲ್ಲೂ ಬೆಂಕಿಯಲ್ಲವೇನೆ ಬರುವುದು? ಪತಿಯೊಡನೆ ಅತಿವಾದ ಬೇಡ ಎಂದೆವು. ಇದು ನಿನಗೆ ಹಿತವೊ? ಅಹಿತವೊ? ಹೇಳು."

"ಹೌದಕ್ಕ. ನೀವು ಎಲ್ಲರೂ ನನಗೆ ಹಿತವೆಯರು. ನಿಮ್ಮ ಭೂಪನೊಬ್ಬ ಮಾತ್ರ ಹಿತನಲ್ಲ. ನನ್ನನ್ನೂ ನಿಮ್ಮನ್ನೂ ವಹಿಸಿಬಿಟ್ಟು ಹೋರಾಡಿಸುತ್ತ, ತಾನು ಉತ್ಸಾಹದಿಂದ ನೋಡುತ್ತಿರುವುದನ್ನು ನೋಡಿ!"

"ಇವಳಿಗೆ ನನ್ನೊಡನೆ ಇನ್ನೂ ಪ್ರಣಯಕಲಹವಾಡುವ ರುಚಿ ಯುಂಟು!" ಎಂಬುದನ್ನು ರಾಜನು ಕಂಡು, "ನೀವು ನಿಲ್ಲಿ, ಯುವತಿಯರಿರ. ನಾನು ಇವಳ ಕೋಪವನ್ನು ಶಾಂತಗೊಳಿಸುತ್ತೇನೆ" ಎಂದ, ಅರಸ.

"ಅವಳಿಗೆ ಅರಸನೊಡನೆ ನುಡಿದಾಡುವ ಇಚ್ಛೆ. ನಮ್ಮ ಅರಸನಿಗೆ ಅದನ್ನು ಕೇಳುವ ಇಚ್ಛೆ. ನಮಗೇನು? ನೋಡೋಣ....ನಾಟಕಸ್ತ್ರೀಯಲ್ಲವೆ! ನೀನು ತಾನು ಎಂದು ಜಟಾಗಿ ನುಡಿದರೆ, ರಾಜನಿಗೆ ರುಚಿ ಏರುತ್ತಿದೆ. ನಾವೂ ಸುಮ್ಮನೆ ಇವರ ಆಟವನ್ನು ನೋಡೋಣ" ಎಂದು ಅರಸಿಯರು ತಮ್ಮತಮ್ಮಲ್ಲೆ ಕಿವಿಯಲ್ಲಿ ಆಡಿಕೊಂಡರು.

ರಾಜನು ಎದುರಿಗೆ ನಿಂತ ಪದ್ಮಿನಿಯನ್ನು ನೋಡಿದ.

"ಇವಳು ಬಾಲೆಯಲ್ಲ, ವಿದಗ್ಧೆಯಲ್ಲ, ಮುಗ್ಧೆಯಲ್ಲ. ಇವಳು ಖಂಡಿತ ಮಧ್ಯೆಮೆ. ಇವಳ ಎದೆಯಾಳ ಇಷ್ಟು. ಇವಳು ಪದ್ಮಿನಿ ಜಾತಿಯ ಹೆಣ್ಣು. ಇವಳ ಹೆಸರು ಕೂಡ ಪದ್ಮಿನಿಯೇ. ಇವಳ ಕಾತರ ಇಷ್ಟು, ಇವಳ ಕಾಮದ ಶಕ್ತಿ ಇಷ್ಟು, ಇವಳ ಆತುರ ಇಷ್ಟು. ಇವಳಿಗೆ ನನ್ನಲ್ಲಿ ಪ್ರೀತಿಯುಂಟು. ಅದಕ್ಕೇ ಮುಖ ನೋಡಿ ನುಡಿಯದೆ, ತೇಲು ನೋಟದಲ್ಲಿ ನುಡಿಯುತ್ತಾಳೆ. ಇವಳನ್ನು ಈಗ ಹೀಗೆ ಕಾಲಿಗೆ ಎರಗಿಸುತ್ತೇನೆ" ಎಂದು ಆಲೋಚಿಸಿ, ಅವಳನ್ನು ಕುರಿತು ಹೀಗೆಂದನು:

"ಎಲೆಗೆ, ಪದ್ಮಿನಿ! ನಿಮ್ಮಿಬ್ಬರಲ್ಲಿ ಒಬ್ಬಳು ಒಳಗಾದ ಮೇಲೆ, ನೀನು ಇನ್ನೂ ಛಲಮಾಡುವುದು ನಲ್ಲದು. ಜೋಕೆ, ಕಾಣೆ. ನಿನ್ನ ಪಂಥ ನಿಲ್ಲಲಾಗದು."

ಅದಕ್ಕೆ ಆ ಧೀರೆ ಹೇಳಿದಳು:

"ಅಕ್ಕಿದೆಯವಳು ಮಾನಿನಿಯೊಬ್ಬಳು ಲಜ್ಜೆಯಿಲ್ಲದೆ ನಿನಗೆ ಎರಗಿದಳೆಂದರೆ — ಈ ಪದ್ಮಿನಿ ಬಿಳ್ಳುಹೋಗುವಳೆ! ವಿಶ್ವಾಸವಿದ್ದ ಕಡೆ ಕಾಲಿಗೆ ಎರಗಬಹುದು. ಉದಾಸೀನಕ್ಕೆ ಎರಗುವವರು ಯಾರು? ಕಾಸೆಯಲ್ಲವೆ ನಾನು ಕಟ್ಟಿರುವುದು? ನೀನೂ ನೋಡು, ನಿನ್ನ ರಾಣಿವಾಸದವರೂ ನೋಡಲಿ!"

"ಅಷ್ಟುಂಟೆ ನಿನಗೆ ಮನೋಧೈರ್ಯ!"

"ಉಂಟು. ಉಂಟು."

"ಎಲ್ಲಿ: ದೃಷ್ಟಿಸಿ ನೋಡಿ, ಮಾತಾಡು."

"ಭ್ರಷ್ಟರಂತೆ ಅಡ್ಡಮೋರೆಯಲ್ಲಿ ಏಕೆ ನುಡಿದೇವು?"

"ಭಲಾ! ಉತ್ಕೃಷ್ಟಧೀರೆ!"

"ನೋಡಿದರೇನು ಮುಖವನ್ನು?"

—ಎಂದು ವ್ಯಸನದಿಂದ ತುಂಬಿದಂತೆ ತಿರುಗಿ ನೋಡಿದಳು.

ಕೂಡಲೆ ವ್ಯಸನ ಓಡಿತು. ನಗೆ ಮೂಡಿತು. ನಗುತ್ತ ಆಕೆ ಒಡನೆಯೆ ತಲೆಯನ್ನು ಬಗ್ಗಿಸಿದಳು.

ತಲೆಬಾಗಿ ನಿಂತವಳನ್ನು ಕಂಡು, "ನೀನು ಅಲ್ಲಿಯೇ ನಿಂತು ತಲೆ

ಬಾಗಿದರೆ, ನಾನು ಒಪ್ಪುವುದಿಲ್ಲ. ನಲಿದು ಬಂದು ನನ್ನ ಕಾಲಿಗೆರಗಬೇಕು" ಎಂದನು.

"ಇಲ್ಲಿ ಯಾರು ನಿನಗೆ ಎರಗಿದವರು ?" ಎಂದು ತಲೆಯೆತ್ತಿ ಅವಳು ನೋಡಿದಳು. ಕೂಡಲೆ ನಗೆ ಸೇರಿತು. ಒಡನೆಯೆ ತಲೆಬಾಗಿದಳು.

"ನೋಡು. ನಾರಿ ಮತ್ತೆ ಎರಗಿದಳು" ಎಂದ, ಅರಸ.

ವ್ಯಸನವನ್ನು ಎತ್ತಿಕೊಳ್ಳುವಳು. ಚೆಲುವರ ಅರಸನ ಮುಖ ಕಂಡೊಡನೆ ಅದು ಜಾರುವುದು. ನಗೆಯನ್ನು ಒತ್ತರಿಸುವಳು. ಆದರೂ ಅದು ತನ್ನಷ್ಟಕ್ಕೆ ತಾನೆ ನಲವಿಂದ ನೆಗೆಯುವುದು. ಅದನ್ನು ನಿಲ್ಲಿಸಬೇಕೆಂದು ಧೈರ್ಯವನ್ನು ಬಿಗಿಪಡಿಸುವಳು. ಅದು ನಿಲ್ಲದೆ ಜರಿದು ಓಡುವುದು. 'ಒಲ್ಲೆ, ಹೋಗು' ಎಂದು ಕಾತರವನ್ನು ನೂಕುವಳು. ಅದು ಮೈಗೆ ಹಬ್ಬಿ ಕೊಲ್ಲುವುದು.

"ಇನ್ನೂ ಪಂಥವೆ, ಪದ್ಮಿನಿ ?" ಎಂದ, ಅರಸ.

"ಇವನನ್ನು ಇನ್ನು ಹೇಗೆ ಜಯಿಸುವುದು ?" ಎಂದು ಆ ಚೆನ್ನೆ ಯೋಚಿಸಿ, ಉಪಾಯಕಾಣದೆ, ತಲೆಯೆತ್ತಿ ಚೆನ್ನಾಗಿ ನಗುತ್ತ ನುಡಿದಳು :

"ಎಲೆ ಮಾಯಕಾರ! ನಿನ್ನ ಮುಖವನ್ನು ಕಂಡರೆ, ನನಗೆ ನಗೆ ದಳವೇರುತ್ತಿದೆ. ತಲೆ ಕುಸಿದರೆ, ನಮಿಸಿದಳು ಎನ್ನುತ್ತೀಯೆ. ಇನ್ನು ನಿನ್ನನ್ನು ಗೆಲ್ಲುವುದು ಹೇಗೆ ?...ಇನ್ನು ನಿನ್ನನ್ನು ಕುರಿತು ನೋಡದೆ, ಓರೆಮೋರೆಯಲ್ಲಿರುವೆನು. ಅದು ಹೇಗೆ ಜಯಿಸುವೆಯೋ ಜಯಿಸು."

"ಕೊಂಕುಮೋರೆಯ ಹೆಣ್ಣಿನೊಡನೆ ನಾನು ನುಡಿವವನಲ್ಲ, ಎಲೆ ಕುಂಕುಮವರ್ಣೆ! ನೋಡಿ, ಮುಖಕ್ಕೆ ಮುಖ ಕೊಟ್ಟು ಮಾತನಾಡದೆ, ಅಡ್ಡಮುಖವಾಗಿ ಮಾತನಾಡುವ ಈ ಡೊಂಕು ನಮ್ಮ ಆಟವಲ್ಲ. ಇದು ಸರ್ಪವನ್ನು ಕಂಡ ಕೋಡಗದ ಆಟ. ಹೋಗು."

ಪದ್ಮಿನಿ ಸುಮ್ಮನೆ ತಲೆವಾಗಿ ಮೌನದಿಂದ ನಿಂತಳು.

ರಸಿಕರ ದೇವನಾದ ಆ ರಾಜ ಮತ್ತೊಂದು ತಂತ್ರವನ್ನು ನೆನೆದ :

"ನಿಂತೆಯಾದರೆ, ಪದ್ಮಿ, ನನ್ನಾಣೆ. ನಡೆದು ಬಾ."

ಆಣೆಯನ್ನು ಮೀರಲಾರದೆ ಅವಳು ಹತ್ತು ಹೆಜ್ಜೆ ನಡೆದು, ಅಲ್ಲಿ ನಿಂತಳು. ಕಡೆಗಣ್ಣಿನಿಂದ ರಾಜನನ್ನು ತಿವಿಯುತ್ತಾ ಹೇಳಿದಳು :

“ ಜಾಣತನದಿಂದ ನನ್ನನ್ನು ಜಯಿಸಲಾರದೆ, ತಾನು ತನ್ನ ಮೇಲೆ ಆಣೆಯಿಟ್ಟು ನನ್ನನ್ನು ಕರೆಯುತ್ತಾನೆ. ಸಾಕು, ಮತ್ತೆ ನನ್ನನ್ನು ಕರೆಯಬೇಡ.”

—ಎಂದು ಅಲ್ಲೆ ಮಾಣಿಕ್ಯದ ಬೊಂಬೆಯಂತೆ ನಿಂತಳು.

“ ಅಲ್ಲೇ ನಿಂತಿದ್ದೆಯಾದರೆ, ಪದ್ಮಿ, ಗದ್ದುಗೆಯಲ್ಲಿ ಮೆರೆಯುವವನ ಮೇಲೆ ಆಣೆ! ”

ಪದ್ಮಿನಿ ವಲ್ಲಭನ ಎದುರಿಗೆ ಬಾರದೆ, ಬಲಗಡೆಗೆ ಎಂಟು ಹೆಜ್ಜೆ ಹಾಕಿ, ನಿಂತಳು.

“ ಮಡದಿ! ನೀನು ಅತ್ತ ಸಾಗಿದೆಯಾದರೆ, ಈಗ ನಿನ್ನೊಡನೆ ನುಡಿವವನ ಮೇಲೆ ಆಣೆ! ”

ಆದರೂ ಅವಳು ನೃಪನ ಕಡೆಗೆ ನಡೆಯದೆ, ಮೌನದಿಂದ ಎಡದ ದಿಕ್ಕಿಗೆ ಸಾಗಿ, ನಿಂತಳು.

ಎದುರಾಗಿ ಬಾರದೆ, ಎಡಬಲಗಳಿಗೆ ಒಲಿದು ಆಕೆ ಆ ಮಂಟಪದಲ್ಲಿ ಅಡಿಯಿಟ್ಟುದನ್ನು ಕಂಡು, “ ತಾಳ ಮದ್ದಲೆಯಿಲ್ಲ. ಕಟಿಸೂತ್ರ, ಕಂಕಣ, ಕಾಲಂದುಗೆಗಳ ನಾದದಲ್ಲಿ ಚಾಲುಚಾಲನೆ ನಡೆದಾಡಿ ನರ್ತಿಸಿದ ನಿನ್ನ ಈ ಲಾಸ್ಯ ಸೊಗಸಾಯಿತು, ಪದ್ಮಿ! ” ಎಂದ, ರಾಜ.

ಪದ್ಮಿನಿ ಆಗ ಆ ದುಗುಡಕೋಲಾಹಲನ ಮುಂದೆ, ದುರ್ಗ ಕೋಲಾಹಲನ ಮುಂದೆ, ಪಗೆಕೋಲಾಹಲನ ಮುಂದೆ ನಗುವಳು, ತಲೆ ಬಾಗುವಳು, ನೋಡುವಳು, ಮುಖ ತಿರುಹುವಳು, ಮನಸ್ಸಿನಲ್ಲಿ ಉಬ್ಬುವಳು.

## ೧೩

ಅವಳ ಮನಸ್ಸು ಹದವಾಯಿತು ಎಂಬುದನ್ನು ತಿಳಿದು, ಅರಸಿಯರು ಒಬ್ಬೊಬ್ಬರಾಗಿ ಎದ್ದು ಓಡಿಬಂದು, “ ಪದ್ಮಿನಿ, ಇನ್ನು ನೀನು ನಿನ್ನ ಗರ್ವವನ್ನು ಬಿಡು ” ಎಂದರು. “ ನಿನ್ನ ಧೈರ್ಯ ಓಡಿತು. ಸ್ವಾಮಿಯ ಮಾತು ವ್ಯರ್ಥವಾಗಲಿಲ್ಲ. ಇನ್ನು ತಡಮಾಡದೆ ಒಡೆಯನ ಕಡೆಗೆ ಬಾ ” ಎಂದು ಕರೆದರು.

ರಾಣಿಯರ ಸಂಧಾನದಲ್ಲಿ ಬಂದು, ಪದ್ಮಿನಿ ರಾಜನ ಕಾಲಿಗೆ ಎರಗಿದಳು. ಅವಳನ್ನು ಕಂಡೊಡನೆಯೆ ರಾಜನು ಅವಳನ್ನು ನೋಡದೆ ಮುಸುಕಿಕ್ಕಿಕೊಂಡನು. ಚಾರುಚಂದ್ರನ ಮೇಲೆ ಧವಳಾಕಾರದ ಮುಗಿಲು ಮುಸುಕಿತೋ ಎಂಬಂತೆ ಕ್ಷೀರೋದಕವೆಂಬ ಆ ಪಟ್ಟೆವಸ್ತ್ರವು ರಾಜನ ದೇಹವನ್ನು ಮುಸುಕಿತು.

ಕುಳಿತಿದ್ದ ರಾಣಿಯರೆಲ್ಲರು ತಳಮಳಗೊಂಡರು. ಒಬ್ಬರನ್ನೊಬ್ಬರು ನೋಡುತ್ತ, ರಾಯನ ಬಳಿಗೆ ಬಂದು, ಬಳಸಿ ನಿಂತು, "ಕಾಲಿಗೆ ನಮಿಸಿದವಳನ್ನು ನೋಡದೆ, ಮುಸುಕಿಕ್ಕುವುದೇಕೆ?" ಎಂದು ಕೇಳಿದರು.

"ಅವಳನ್ನು ಕಾಣಿಸಿಕೊಳ್ಳವೊಲ್ಲೆ. ಆಜ್ಞೆಯನ್ನು ಮೀರಿದವಳಿಗೆ ಕಾಣಿಸಿಕೊಂಡರೆ, ಅದು ನನ್ನ ಆಜ್ಞೆಗೆ ಊನ" ಎಂದು ರಾಜ ಮುಸುಕಿನ ಒಳಗಿಂದಲೇ ಹೇಳಿದ.

"ಆಣೆಯನ್ನು ಮೀರಲಿಲ್ಲವಲ್ಲ. ಅವಳು ಹೇಳಿದಂತೆ ನಡೆದಳಲ್ಲ" ಎಂದು ಅವರು ವಿಜ್ಞಾಪಿಸಿದರು.

"ಎಲ್ಲಿಗೆ ನಡೆದಳು? ಎಡಕ್ಕೂ ಬಲಕ್ಕೂ ಒಲೆದಾಡಿದರೆ, ನನ್ನ ದಿಕ್ಕಿಗೆ ನಡೆದ ಹಾಗಾಯಿತೆ? ನಿಮ್ಮ ಈ ಜಾಣತನ ನನಗೆ ಬೇಡ. ಸುಮ್ಮನಿರಿ" ಎಂದು ರಾಜ ಒಳಗಿಂದಲೇ ಗದರಿಸಿದ.

"ಮೊದಲೇ ಹೇಳಲಿಲ್ಲವೆ, ಅತಿವಾದ ಬೇಡ ಎಂದು? ಅದನ್ನು ಮೀರಿದ್ದಕ್ಕೆ ಈಗ ಅನುಭವಿಸು. ಚದುರೆ ಪದ್ಮಿನಿ, ಇದಕ್ಕೆ ಏನು ಪರಿಹಾರವೋ ಅದು ನಿನಗೇ ಗೊತ್ತು" ಎಂದು ಅರಸಿಯರು ತೆಪ್ಪಗಾದರು.

ಪದ್ಮಿನಿ ಮಾತಾಡಲಿಲ್ಲ, ದೈನ್ಯಪಡಲಿಲ್ಲ. ಕಾಲಿಗೆರಗಿದರೂ ಅರಸನು ಮುನಿದುದನ್ನು ಕಂಡು, ಪದ್ಮಿನಿ, ಪಗಡೆಯಾಡಿ ಸೋತವಳಂತೆ ಇದ್ದಳು.

ಆಗ ಕೆಲವರು ಭಾವಜ್ಞೆಯರು ಅವಳ ಮನೋಭಾವವನ್ನೂ ಅರಸನ ಮನಸ್ಸನ್ನೂ ತಿಳಿದು, "ಇದು ಯಾವ ಕೆಲಸ? ಇದಕ್ಕೇಕೆ ಅಂಜಬೇಕು? ನಾವು ತಿದ್ದಿಕೊಡುತ್ತೇವೆ" ಎಂದು ಆ ಚಂದ್ರಮುಖಿಗೆ ಭರವಸೆ ಹೇಳಿದರು. ರಾಜನ ಬಳಿಗೆ ಬಂದು—

"ಭೂಪ, ನಿನ್ನ ಮುಸುಕನ್ನು ತೆಗೆ. ಇವಳಿಂದ ಅಪರಾಧವನ್ನು ತೆರಿಸಿಕೊಡುತ್ತೇವೆ. ಈ ಧೂರ್ತೆಗೋಸ್ಕರ ನೀನು ಮುಸುಕಿಕ್ಕಬೇಕೆ?" ಎಂದರು.

"ಏನು ತಪ್ಪು ಕೊಡಿಸುತ್ತೀರಿ?"

"ಇವಳನ್ನು ನಿನಗೆ ಒಪ್ಪಿಸುತ್ತೇವೆ. ನಿನ್ನ ಮನಸ್ಸಿಗೆ ಬಂದಂತೆ ಮಾಡಿಕೊ."

"ಈ ಮಾತಿಗೆ ನಾನು ಒಪ್ಪುವುದಿಲ್ಲ. ಸರಿಯಾಗಿ ಹೇಳಿರಿ."

"ಪುರುಷನಿಗೆ ತಪ್ಪುಮಾಡಿದ ಕಾಂತೆ ತಾನು ತನ್ನ ಅರಸಿತನದ ಹೆಮ್ಮೆನ್ನು ಬಿಟ್ಟು, ಪರಿವಾರದ ಸತಿಯಂತೆ ಕಾಳಂಜಿಯನ್ನು ಹಿಡಿದಾಗ, ಅದು ಮಾಡಿದ ತಪ್ಪಿಗೆ ಪರಿಹಾರ. ಈ ವನಿತೆ ಎಲೆಯಡಿಕೆಯನ್ನು ಉಗುಳುವ ಪಾತ್ರೆಯನ್ನು ಹಿಡಿದು, ಸ್ವಾಮಿಯ ಶಯ್ಯಾಗೃಹಕ್ಕೆ ಬರುತ್ತಾಳೆ. ಇದು ನಮಗೆ ಒಪ್ಪಿಗೆ. ಇನ್ನು ಮುಸುಕು ತೆಗೆಯಬೇಕು" ಎಂದು ಎಲ್ಲ ಹೆಂಗಸರೂ ಅರಸನಿಗೆ ಅಡ್ಡಬಿದ್ದರು.

"ನೀವು ಹೇಳಿದ್ದನ್ನು ನಾನು ಕೇಳಬೇಕಾದರೆ, ನಾನು ಹೇಳುವುದನ್ನು ನೀವೂ ಕೇಳಬೇಕು."

"ಯಾವುದು ಹೇಳಿದರೂ ಕೇಳುತ್ತೇವೆ."

ಅವರು 'ಹೇಳಿದಂತೆ ಕೇಳುತ್ತೇವೆ' ಎಂದ ಕೂಡಲೆ, ದೊರೆಯು ಮುಸುಕನ್ನು ತೆಗೆದನು. ಕವಿದ ಬೆಳ್ಮುಗಿಲನ್ನು ನೂಕಿ ಸಂಪೂರ್ಣಚಂದ್ರ ನ್ನೈತೋರುವಂತೆ ರಾಜನು ಕಾಣಿಸಿಕೊಂಡನು.

"ಈ ಸಟೆಯ ನೆಪದಿಂದ ರಾಜನ ಮುಖಕ್ಕೆ ಅನ್ಯಾಯವಾಗಿ ಮುಸುಕುಬಿತ್ತು" ಎಂದು ಆ ಜಾಣೆಯರು ಮುತ್ತಿನ ಅಕ್ಷತೆ ತಳಿದು, ನೀರಾಜನದ ಉತ್ಸವ ಮಾಡಿದರು. "ದೊರೆಯೆ, ನಿನ್ನ ಮೇಲೆ ನಿನ್ನ ಅರಸಿತಿಯರಿಗಿದ್ದ ಮೋಹ, ಈಗ, ನೀನು ಮುಸುಕು ತೆಗೆದ ಮೇಲೆ, ಅದು ಇಮ್ಮಡಿಸಿದೆ" ಎಂದರು.

"ಸಾಕು ನಿಮ್ಮ ಕೊಂಡಾಟ. ನಿಲ್ಲಿಸಿ" ಎಂದು, ಆ ತಾಂಡವ ಸತಿಯರನ್ನು ಕರೆದು, ಹಿಡಿಹಿಡಿಯಾಗಿ ಉಡುಗೊರೆಗಳನ್ನು ತೆಗೆದು, "ಇದಿಗೊ, ಹಿಡಿಯಿರಿ!" ಎಂದನು.

ಅವರು ಹಿಡಿಯಲು ಒಲ್ಲದೆ, ಒಬ್ಬರು ಒಬ್ಬರ ಮುಖ ನೋಡಿದರು.

ದೊರೆ ಉಡುಗೊರೆಯನ್ನು ನೆಲಕ್ಕೆ ಚೆಲ್ಲಿ, ಮತ್ತೆ ಮುಸುಕಿಕ್ಕಿಕೊಂಡ.

"ಹೇಳಿದಂತೆ ಕೇಳುತ್ತೇವೆ ಎಂದು ನನ್ನಲ್ಲಿ ಹೇಳಿ, 'ಕೋ, ಹಿಡಿಯಿರಿ' ಎಂದರೆ, ಒಲ್ಲಿರಲ್ಲಾ! ನಿಮ್ಮ ನುಡಿ ನಿಮಗಿರಲಿ. ನಮ್ಮ ನುಡಿ ನಮಗಿರಲಿ" ಎಂದು ನುಡಿದು, ದೊರೆ ಮೌನವನ್ನು ಧರಿಸಿದನು.

"ನಾವು ಬೇಡ ಎಂದು ಎಲ್ಲಿ ಹೇಳಿದೆವು? ನಮ್ಮನಮ್ಮ ಮುಖ ಇಷ್ಟು ನೋಡಿಕೊಂಡರೆ, ಅದಕ್ಕೆ ಇಷ್ಟು ಕೋಪವೆ? ಬೇಕಾದ ಹಾಗೆ ಕೊಡು. ನೀನು ಕೊಟ್ಟುದನ್ನೆಲ್ಲ ತೆಗೆದುಕೊಳ್ಳುತ್ತೇವೆ" ಎಂದು ಅವರೆಲ್ಲ ಕಾಲುಹಿಡಿದು ಬೇಡಿಕೊಂಡರು.

"ಅಂತಃಪುರದವರೆಲ್ಲರೂ ನಾನು ಕೊಟ್ಟ ಹಾಗೆ ಉಡುಗೊರೆಯನ್ನು ತೆಗೆಯುವುದು ಉಂಟು ತಾನೆ! ಕಾಂತೆಯರಿರ, ನೀವು ಮಾತಾಡಿ. ಇಲ್ಲದಿದ್ದರೆ, ಹಾಗೇ ಇರಿ."

"ದೇವ, ನೀನು ಕೊಟ್ಟುದನ್ನು ತೆಗೆದುಕೊಳ್ಳುತ್ತೇವೆ, ತೆಗೆದುಕೊಳ್ಳುತ್ತೇವೆ" ಎಂದು ಆ ವನಿತೆಯರು ಕಾಲುಹಿಡಿದು, "ಮುಸುಕನ್ನು ತೆಗೆ, ತೆಗೆ" ಎಂದು ಬೇಡಿಕೊಂಡರು.

## ೧೪

"ಹಾಗಾದರೆ ಇಷ್ಟು ತಾಳಿ" ಎಂದು ತಾನು ಹಾಕಿದ್ದ ಮುಸುಕನ್ನು ತೆಗೆಯದೆ ಹಾಗೆಯೇ ಒಂದು ತಂತ್ರವನ್ನು ನೆನೆದನು. "ನಾನು ಒಂದೇ ರೂಪಿನಲ್ಲಿದ್ದು ಇಷ್ಟು ಜನಕ್ಕೂ ಮನ್ನಣೆಗಳನ್ನು ತಿದ್ದಿದರೆ, ತುಂಬ ತಡವಾಗುತ್ತದೆ. ಆದ್ದರಿಂದ, ನನಗಿರುವ ವಿಕ್ರಿಯಾ ಎಂಬ ವಿದ್ಯೆಯ ಬಲದಿಂದ ಹಲವು ರೂಪಾಗುವೆನು" ಎಂದುಕೊಂಡು, ಮುಗಿದ ಕಣ್ಣಿನಿಂದ ಶ್ರೀ ಹಂಸನಾಥನನ್ನು ನೋಡಿ, ಮಹಾಸಮರ್ಥವಾದ ಚಿನ್ಮಂತ್ರವನ್ನು ಜಪಿಸಿ, ತನ್ನ ಮುಸುಕನ್ನು ತೆಗೆದುಹಾಕಿದನು.

ಹೊದ್ದಿದ್ದ ಮುಸುಕು ತೆಗೆದರೆ — ಆ ಮನೆತುಂಬ ಎತ್ತ ನೋಡಿದರೆ ಅತ್ತ ಭರತೇಶರೇ! ಭರತಭೂಪಾಲನೇ ಹಲವು ರೂಪಾಗಿ, ಒಬ್ಬೊಬ್ಬ ಅಬಲೆಗೂ ಒಬ್ಬೊಬ್ಬ ಭರತೇಶನಾಗಿ, ಇಂದ್ರಜಾಲವನ್ನು ಬೀಸಿದಂತಾಯಿತು.

ಗದ್ದುಗೆಯಲ್ಲಿ ಕುಳಿತಿದ್ದವನೊಬ್ಬ, ಕೆಳಗೆ ನಿಂತಿದ್ದ ಲತಾಂಗಿಯರೊಡನೆ ಎದ್ದು ನಿಂತಿದ್ದವನೊಬ್ಬ, ಒಬ್ಬೊಬ್ಬಳಿಗೊಬ್ಬ ಮುದ್ದಿನ ಭರತೇಶನಾಗಿ ಮೈದೋರಿದನು.

ಭರತೇಶನಿಲ್ಲದ ಏಕಾಕಿಯಾಗಿರುವಸತಿಯೊಬ್ಬಳನ್ನೂ ಕಾಣದೆ, ಅರಸಿಯರೆಲ್ಲ ತಲೆದೂಗಿ, 'ಜಿನಸಿದ್ಧ!' ಎಂದು ತಮ್ಮ ಪುರುಷನ ಏಳಿಗೆಗೆ ಹಿಗ್ಗಿದರು.

ಗದ್ದುಗೆಯಲ್ಲಿ ಮೂಲಶರೀರ ತೋರುತ್ತಿತ್ತು, ಕೆಳಗೆ ಶಾಖಾಶರೀರ ಹಲವಾರು ಇದ್ದುವು. ಆ ಹಲವು ಶರೀರಗಳಲ್ಲಿದ್ದ ಆತ್ಮ ಒಬ್ಬ ಮಾತ್ರ ಪರಿಪೂರ್ಣನಾಗಿದ್ದ. ಹೀಗೆ ದೇಹ ಹಲವು, ಮತ್ತೆ ಆತ್ಮ ಒಂದೇ ಆಗಿರಲು ಆತನು — ಸ್ಯಾತ್ ಎಂಬ ನುಡಿಗೆ ವಿಮುಖವಾದ ಬ್ರಹ್ಮಾದ್ವೈತವು ನಾಟ್ಯವನ್ನು ಆಡಿದಂತೆ - ತೋರಿದನು. ಮೂಲವನ್ನು ಮುಟ್ಟಿ, ಶಾಖೆಯನ್ನು ಮುಟ್ಟಿ, ಸ್ಪರ್ಶನವನ್ನು ತಿಳಿಯುವ ವೃಕ್ಷದಂತೆ ಆ ವಿಕ್ರಿಯಾಂಗನು ಮೂಲ ದೇಹದಲ್ಲೂ ಶಾಖಾದೇಹದಲ್ಲೂ ಸುಖಲೀಲೆಯನ್ನು ಕಂಡನು.

ತನ್ನ ಉತ್ತಮವಾದ ಆಭರಣಗಳನ್ನೂ ವಸ್ತ್ರಗಳನ್ನೂ ತೆಗೆದು ತಾನು ತನ್ನ ಸತಿಯರಿಗೆ ಕೊಡುತ್ತ, ಅವರನ್ನು ಅಪ್ಪಿಕೊಳ್ಳುತ್ತ, ಅರ್ತಿಮಾಡಿದನು. ಅಲ್ಲಲ್ಲಿ ನಿಂತವಳಿಗೆ ಅಲ್ಲಲ್ಲಿ ಉಡುಗೊರೆಕೊಟ್ಟು, ಅಲ್ಲಲ್ಲೆ ಬಿಗಿದಪ್ಪುತ್ತ, ಎಲ್ಲಿ ನೋಡಿದರೂ ತಾನೇ ಆಗಿ, ಆ ರಾಯನು ಚೆಲ್ಲಿದಂತೆ ಆಗಿ ಕಂಡನು.

ಅವನು ಉತ್ತಮವಸ್ತುವನ್ನು ಕೊಟ್ಟು, ಅವರನ್ನು ಆಲಿಂಗಿಸುವ ಹೊತ್ತಿನಲ್ಲಿ ಪ್ರತಿಯೊಬ್ಬಳಿಗೂ ತಾನೂ ತನ್ನ ಅರಸ ಮಾತ್ರ ಇದ್ದೇವೆಂದು ಎನ್ನಿಸುವುದು. ತಿಲಕವನ್ನು ತಿದ್ದುವನು, ಹಣೆಗೆ ಹಣೆಯಿಟ್ಟು ಅದನ್ನು ಕಲಕಿಬಿಡುವನು, 'ಎಲೆಗೆ, ನಿಲ್ಲು. ಚೆನ್ನಾಗಿ ಬೊಟ್ಟಿಡುವೆನು' ಎಂದು ಚೊಕ್ಕನಾದ ಬೊಟ್ಟನ್ನು ಇಡುವನು. ಕೆಲವರನ್ನು ಅಪ್ಪುವನು, ಕೆಲವರನ್ನು ಚುಂಬಿಸುವನು, ಕೆಲವರಿಗೆ ತಾಂಬೂಲ ಕೊಡುವನು. ಒಬ್ಬ ಪುರುಷ ಒಬ್ಬ ಸತಿಯನ್ನು ಮನ್ನಿಸುವಂತೆ ಸರ್ವಜ್ಞನಾದ ಆ ಭರತ ಸರ್ವಕಾಂತೆಯರನ್ನೂ ಮನ್ನಿಸಿದನು.

ಅನಂತರ, ಅವರಿಗೆ ಕ್ಷಣಕ್ಷಣಕ್ಕೂ ಕಾತರ ಏರುವುದನ್ನು ಕಂಡು, "ಸಾಕು. ಇನ್ನು ಶಯ್ಯಾಗೃಹಕ್ಕೆ ಹೋಗೋಣ" ಎಂದನು.

"ಏಕೆ ಸುಮ್ಮನೆ ನಿಂತೆ, ಪದ್ಮಿನಿ? ತಾಂಬೂಲ ಉಗುಳುವ ಪಾತ್ರೆಯನ್ನು ಎತ್ತಿಕೊ" ಎಂದರು, ಅರಸಿಯರು.

"ಹಾಗೆಯೇ ಆಗಲಿ" ಎಂದು ಅವಳು ಅದಕ್ಕೆ ಕೈನೀಡುವ ಹೊತ್ತಿಗೆ ಅರಸನು ಅವಳ ಕೈಹಿಡಿದು, "ನಿನ್ನ ಸೇವೆ ಆಗಲೇ ಸಂದಿತು" ಎಂದು ಅವಳನ್ನು ಅಕ್ಕರೆಯಿಂದ ಅಪ್ಪಿಕೊಂಡ. ಆ ತಬ್ಬಿದ ವೇಳೆಯಲ್ಲಿ ಅವಳು ಮುಂದಿನ ಹೆಬ್ಬಾಗಿಲು ಹಿಡಿಸದ ಹಾಗೆ ಉಬ್ಬಿದಳು. ಮನ್ಮಥನ ಹಾಗಿದ್ದ ಆ ರಾಯನು ಆ ಸಿಡುಹುಬ್ಬಿನ ಹೆಣ್ಣಿಗೆ ಮುತ್ತುಕೊಟ್ಟು ಮನ್ನಿಸಿದನು.

"ತಾಂಬೂಲ ಉಗುಳುವ ಪಾತ್ರೆಯನ್ನು ಹಿಡಿದರೆ ಏನು ಕೊರತೆ?" ಎಂದು ಆ ಕಾಂತೆ ಆ ಅರಸನ ಹತ್ತಿರ ನಿಂತಳು. ಉಳಿದ ಲಲನೆಯರು ತಾವೇ ಆ ಪಾತ್ರೆಯನ್ನು ಎತ್ತಿ ತಂದು ಅರಸನ ಮುಂದೆ ಇರಿಸಿದರು.

"ವಿನೋದಕ್ಕಾಗಿ ಇವನನ್ನು ಒಂದು ಅಪರಾಧಕ್ಕೆ ಶಿಕ್ಷೆ ಎಂದೆವೇ ಹೊರತಾಗಿ, ನಿನಗೆ ಕಾಳಂಜಿ ಹಿಡಿಯುವುದು ಯಾವ ಹೆಣ್ಣಿಗಾದರೂ ಅವಳ ಪೂರ್ವಪುಣ್ಯ!" ಎಂದು ಅಕ್ಕರೆಯಿಂದ ಆ ಹೆಣ್ಣುಗಳು ಹೇಳಿದರು.

ಅಷ್ಟರಲ್ಲಿ ನಡುರಾತ್ರಿಯ ಗಂಟೆ ಠೊಂಠಣನೆ ಕೇಳಿಸಿತು.

"ಮುನಿಸು ತಿಳಿಸುವುದರಲ್ಲಿ ಇಷ್ಟು ವೇಳೆಯಾಯಿತು" ಎಂದು ಅರಸನು, ಹಿಂದೆ ಇದ್ದ ಆದಿಜಿನ ಬಿಂಬಕ್ಕೂ ಮುಂದೆ ಇದ್ದ ಛಾಯಾ ಬಿಂಬಕ್ಕೂ ತಲೆಬಾಗಿಸಿ, ಗದ್ದುಗೆಯಿಂದ ಎದ್ದನು.

ಕಾಲಿನ ಚಿನ್ನದ ಆಭರಣಗಳು ಝಣಝಣ ಎಂದುವು. ಹೆಂಡಿರ ಹಿಂಡೂ ಅವನ ಕೂಡ ಹೊರಟುವು.

೧೫

ಕೊಳದಲ್ಲಿ ಆಡಿದ ಗಂಡುಹಂಸ ತನ್ನ ಹೆಣ್ಣಿನ ಒಡನೆ ಕೂಡಿ ಮತ್ತೊಂದು ತಿಳಿಯ ಕೊಳದ ಕಡೆಗೆ ಹೋಗುವಂತೆ ಆ ರಾಜನು ಆ ಎಳೆಯ ಹೆಣ್ಣುಗಳೊಡನೆ ಆ ನಾಟಕಶಾಲೆಯಿಂದ ಶಯ್ಯಾಗೃಹಕ್ಕೆ ತೆರಳಿದನು. ವರ್ಧನಾವತಿ ಎಂಬ ಆ ಚಿನ್ನದ ನಾಟ್ಯಮಂಟಪದಿಂದ ಪುಷ್ಕರಾವತಿಯೆಂಬ ಮಲಗುವ ಮನೆಗೆ ಹೋದನು. ನಾಟಕಶಾಲೆಯಲ್ಲಿ ತೋರಿದ ಹಲವು

ರೂಪನ್ನು ಹಾಗೇ ಉಳಿಸಿಕೊಂಡು, ಹಲವರು ನೀರೆಯರ ಕೈಹಿಡಿದುಕೊಂಡು, ಕಾಮನ ದೇಶವನ್ನು ಸೂರೆ ಹೊಡೆಯುವಂತೆ ಆ ದೊರೆ ನಡೆದನು.

ಕೆಂಪು, ಕರಿದು, ಶ್ಯಾಮ, ತೆಳು, ತೋರ, ನುಣ್ಪು ಮುಂತಾದ ವೈಯ ಹೆಣ್ಣುಗಳ ಗುಂಪಿನಲ್ಲಿ ತಾನೊಬ್ಬನು ಹಲವು ರೂಪಾಗಿ ಅವರ ಕೈಹಿಡಿದು ಬಂದನು. ಕೆಲವರ ಕೈಗೆ ಕೈಆಸರೆಕೊಟ್ಟು, ಕೆಲವರ ನಡುವಿನ ಸುತ್ತ ತೋಳು ಬಳಸಿ, ಕೆಲವರನ್ನು ಅಪ್ಪಿ ಮಾತಾಡುತ್ತ ನಡೆದನು. ಕೆಲವರ ಬೆರಳಿನಲ್ಲಿ ತಾನು ಚಿಟುಕು ತೆಗೆಯುತ್ತ, ಕೆಲವರಿಂದ ತನ್ನ ಬೆರಳಿನ ಚಿಟುಕು ತೆಗೆಯಿಸುತ್ತ ನಡೆದನು. ಕೆಲವರಿಗೆ ತಾನು ಎಲೆಯನ್ನು ಮಡಿಸಿಕೊಡುತ್ತ, ಮತ್ತೆ ಕೆಲವರಿಂದ ತಾನು ಮಡಿಯಿಸಿಕೊಳ್ಳುತ್ತ ನಡೆದನು.

" ಇದೇನೆ ಇಷ್ಟು ಜಿಪುಣತನ ? ಒಂದು ಎಲೆಮಡಿಕೆಯನ್ನು ಪೂರ್ತಿಯಾಗಿ ಕೊಡದೆ, ಅರ್ಧ ನೀನೇ ಕಚ್ಚಿಕೊಂಡೆ ? "

" ನಾವು ಬಡಮನಸ್ಸಿನ ಹೆಂಗುಸರು, ಅರಸೆ. ನಿನ್ನಂತೆ ನಾವೇನು ದೊಡ್ಡ ತ್ಯಾಗಿಗಳೆ ? "

" ಅದಕ್ಕಲ್ಲ, ನಲ್ಲ. ನಿನ್ನ ತುಟಿಸೋಕಿ ಬಂದ ಈ ಎಲೆಯ ಭಾಗ ಬೆಲ್ಲಸಕ್ಕರೆಯ ಸವಿಯನ್ನೂ ಸೋಲಿಸುತ್ತಿದೆ. ಅದಕ್ಕೇ ! "

" ನಮ್ಮ ಕೈಯಿಂದ ನಾವು ಎಷ್ಟು ಎಲೆ ಕೊಂಡರೂ, ಜುಮ್ಮು ತಟ್ಟುವುದಿಲ್ಲ. ಘಮ್ಮನೆ ನಿನ್ನ ತುಟಿ ಸೋಕಿಬಂದರೆ, ಜುಮ್ಮುಜುಮ್ಮೆನ್ನಿಸುತ್ತದೆ. "

" ನಾವು ನಿನಗೆ ನೂರು ಎಲೆ ಮಡಿಸಿ ಕೊಡುವೆವು. ನೀನು ನಮಗೆ ಆರು ಕೊಡು, ಸಾಕು. ಈ ಮಾರಾಟ ನಿನಗೆ ಲಾಭವಲ್ಲವೆ ? "

—ಹೀಗೆ ಒಬ್ಬೊಬ್ಬ ಲಲನೆಗೂ ಒಬ್ಬೊಬ್ಬ ಪುರುಷನಾಗಿ ಹಲವು ಹೆಂಗುಸರೊಡನೆ ಅವನು ನಡೆದುಕೊಳ್ಳುವಾಗ, ಅವರಿಗೆ ಛಲ ಹೇಗೆ ಬರುವುದು ? ಅವರಲ್ಲಿ ಸವತಿಮತ್ಸರ ಹೇಗೆ ನೆಲಸುವುದು ?

ಹೀಗೆ ಹುರುಡು ಹುಟ್ಟಲು ಅವಕಾಶ ಕೊಡದಂತೆ ಸಕಲಕಾಂತೆಯರಲ್ಲೂ ಪರಿಣಮಿಸಿದ್ದನಾದ ಕಾರಣ, ಪುರುಷರಲ್ಲೆಲ್ಲ ಉತ್ತಮನೆಂಬುದಾಗಿ ಆ ಭರತರಾಜನಿಗೆ " ಪುರುಷೋತ್ತಮ " ಎಂದು ಹೆಸರು.

ಮೂಲಶರೀರ ಪದ್ಮಿನಿಯ ಕೈಲಾಘವದ ಆಲಂಬನದಿಂದ ನಡೆಯಿತು. ಸಾಲಾದ ಶಾಖಾದೇಹಗಳು ಮಿಕ್ಕ ಸತಿಯರ ಆಲಿಂಗನದಲ್ಲಿ ನಡೆದ ವು.

ಎದುರಿಗೆ ಅರಸಿಯರ ಶಯ್ಯಾಗೃಹಗಳ ಸಾಲು. ನಡುವೆ ಗೃಹರಾಜ. ಮನೆಮನೆಗೂ ತಪ್ಪದೆ ಚಿನ್ನದ ತೋರಣ, ಚಿನ್ನದ ಗೋಪುರ, ರತ್ನದ ಕಲಶ, ಚಿನ್ನದ ಸೋಪಾನ, ಮುತ್ತಿನ ಜಗಲಿ, ಚಿನ್ನದ ಉಯ್ಯಾಲೆ, ಕಂಬದ ಮೇಲಿನ ಮದನಕೈ, ಕಸ್ತೂರಿ ಸಾದು ಕುಂಕುಮಗಳ ಸಾರಣೆ. ಮನೆಮನೆಯ ಮುಂದೆಯೂ ಮಿರುಮಿರುಗುವ ಮದನಕೈ ವಿಗ್ರಹಗಳಿಂದ ಜೋಲುವ ದೀಪಗಳ ಸಾಲು. ಪ್ರತಿ ಮನೆಮನೆಯಲ್ಲೂ ಚಿನ್ನದ ಮಂಚ, ಮಾಣಿಕ್ಯದ ಮಂಚ, ಶ್ರೀಗಂಧದ ಮಂಚ, ಚಿನ್ನಬೆಳ್ಳಿಯ ಮಂಚ, ಪಂಚರತ್ನದ ಮಂಚ, ನವರತ್ನದ ಮಂಚ, ಚಪ್ಪರದ ಮಂಚ, ಗುಜ್ಜರಿ ಮಂಚ, ಮೇಲುಪ್ಪರ ಮಂಚ, ಹೂಮಂಚ, ಶಕುನಿ ಮಂಚ, ತೂಗು ಮಂಚ, ಸೆಳೆ ಮಂಚ — ಸುತ್ತ ಎತ್ತಲೂ. ಅಲ್ಲಲ್ಲೆ ಹಂಸದ ತುಪ್ಪುಳಿನ ಹಾಸಿಗೆ, ಅವರದೇ ದಿಂಬು, ಗಿಂಡಿ, ವೀಣೆ, ಲಾಮಂಚದ ಬೀಸಣಿಗೆ. ತಟ್ಟೆಗಳಲ್ಲಿ ಪರಿಪಕ್ವವಾದ ಫಲಗಳು, ಪಾನಗಳು, ವೀಳೆಯದೆಲೆಗಳು, ಪರಿಮಳದ ವಸ್ತುಗಳು. ಬರುವ ಸುಖಿಗಳ ಬರವನ್ನು ಎದುರು ನೋಡುತ್ತ ಇವೆಲ್ಲಾ ಮೀಸಲಾಗಿದ್ದುವು.

ಮುದುಕಮುದುಕಿಯರಾಗಲಿ ಒಮ್ಮೆ ಆ ಮನೆ ಹೊಕ್ಕರೆ, ಮದುವೆ ಯಾಗದ ಮಕ್ಕಳು ಒಮ್ಮೆ ಆ ಮನೆಯನ್ನು ಹೊಕ್ಕರೆ, ಅವರಿಗೆ ತಡೆಯದೆ ಪ್ರಾಯವೇರಿ ಕಾಡುವುದು. ಎಂದರೆ — ಅದರ ಸೊಬಗನ್ನು ಏನೆಂದು ವರ್ಣಿಸಲಿ !

ಪಾಂವಾಳದ ಹಕ್ಕಿ ಮದನಕೈಯಲ್ಲಿ ತನ್ನ ಹೆಣ್ಣಿಗಿದಿರಾಗಿ ನಡೆದಾಡಿ, "ಗೂರುಳು ಗುಕುಗುಕು ಗುಟುಗುಟು ಗುರುಗುರು ಚಾರಿಟಿ" ಎಂದಿತು.

"ಭಾವ ಬಂದನು ತನ್ನ ಭಾವಕಿಯೆಡೆಗೀಗ ಭಾವಜಕೇಳಿಗೆ ಬಂದ" ಎಂದು ಕೆಲವು ಗಿಳಿಗಳು ಕೂಗಿದುವು. ಇನ್ನು ಕೆಲವು ಗಿಳಿಗಳು

"ಅಕ್ಕ ಬಂದಳು ಭಾವಗಧರಸುಧೆಯನುಣಲಿಕ್ಕಬಂದಳು
ತನ್ನ ಪತಿಯ ತಕ್ಕೆಯ ಸುಖದೊಳೋಲಾಡಲೈದಿದಳು"

ಎಂದು ಹಾಡಿಕೊಂಡು ನಕ್ಕುವು.

೧೬

ಶಾಖಾದೇಹದಲ್ಲಿ ಒಬ್ಬೊಬ್ಬಳ ಹಸ್ತಶಾಖೆಯನ್ನೂ ಹಿಡಿದು, ಆ ದೊರೆ ಆ ಕೇರಿಯ ಮನೆಗಳನ್ನು ಹೊಕ್ಕನು. ಮೂಲತನುವಿನಿಂದ ಆ ಪದ್ಮಿನಿಯೊಡನೆ ಆ ಕೇರಿಯ ನಡುವಿನ ಗೃಹರಾಜವನ್ನು ಪ್ರವೇಶಿಸಿದನು.

ಬಾಗಿಲಿನಲ್ಲಿ ಆ ಇನಿಯಳ ಕೈಲಾಘವವನ್ನು ಬಿಟ್ಟು, ಒಳಗೆ ಹೋಗಿ ಮಂಚದ ಮೇಲೆ ಕುಳಿತನು.

ಪದ್ಮಿನಿ ಆ ಮನೆಯ ಒಂದು ಮರೆಗೆ ಹೋಗಿ, ತನ್ನ ನಾಟ್ಯಾಗಮ ವೇಷವನ್ನು ತೆಗೆದಳು. ಮೊಳೆಗಟ್ಟು, ಕಾಸೆ, ಚಲ್ಲಣ, ತುರುಬಿನ ಮಣಿ, ಬಲೆ ಮೊದಲಾದುವನ್ನು ತೆಗೆದು, ಬಿಳಿಯ ಪಟ್ಟೆಯನ್ನುಟ್ಟು, ಮೋಹನವನ್ನು ಮೊಗೆದು ಚೆಲ್ಲುತ್ತ ಬಂದಳು. ಸಿಂಹವಾಹಿನಿ ಎಂಬ ಮಂಚದ ಮೇಲಿದ್ದ ಸಿಂಹವಿಕ್ರಮನ ಪಕ್ಕದಲ್ಲಿ ಆ ಸಿಂಹಾಯತಮಧ್ಯೆ ಬಂದು ಕುಳಿತಳು.

ಸುತ್ತಲೂ ನಿಂತ ಪ್ರತಿಮೆಗಳು ಅರಸನಿಗೆ ಕಾಲು ತೊಳೆದುವು, ವಸ್ತ್ರದಿಂದ ಕಾಲು ಒರಸಿದುವು, ವೀಳೆಯವನ್ನು ಕೊಟ್ಟುವು, ಕಾಲೋಚಿತವಾದ ಸೇವೆಮಾಡಿದುವು. ಹಳೆಯ ಅನುಲೇಪನವನ್ನು ತಿಮಿರಿ ತೆಗೆದು, ಪರಿಮಳಗಳನ್ನು ಹೊಸದಾಗಿ ತೊಡೆದು, ಹೂ ಮುಡಿಸಿದುವು, ಹೊಸವಸ್ತ್ರವನ್ನು ಉಡಿಸಿದುವು.

ಹೀಗೆ ಹಲವು ಪುತ್ತಳಿಗಳು ಸೇವೆಮಾಡುತ್ತಿರಲಾಗಿ, ಪದ್ಮಿನಿ ಒಂದು ಪುತ್ತಳಿಯನ್ನು ನಿಲ್ಲಿಸಿ, ಅವರ ಬದಲು ತಾನೇ ಅರಸನಿಗೆ ಎಲೆಯನ್ನು ಮಡಿಸಿಕೊಟ್ಟಳು.

"ಎಲಗೆ ಪಂಥಕಾತಿ! ನೀನು ವೀಳೆಯ ಕೊಡಬೇಡ. ಅದರಲ್ಲಿ ಏನು ವಶ್ಯವಿದೆಯೊ? ನಮಗೆ ಅಂಜಿಕೆಯಾಗುತ್ತದೆ" ಎಂದ, ಅರಸ.

"ನಿನ್ನ ಮುಂದೆ ನನ್ನ ಪಂಥ ನಡೆಯಿತಲ್ಲಾ! ಕೊ, ಸುಮ್ಮನೆ ಹಿಡಿ."

"ಬಿರುನುಡಿಗಳನ್ನೆ ಕಲಿತೆಯಲ್ಲಾ! ಮೃದುವಚನಗಳನ್ನು ಮರೆತೆಯಲ್ಲಾ, ಪದ್ಮಿ!"

"ಬಿರುಸೇನು! ನೀವು ತಾವು ಎಂದು ಹೇಳಬೇಕೇನು? ಆಗಲಿ, ಆಗಲಿ. ದೇವರು ಈ ಎಳಿಮುಡಿಕೆಯನ್ನು ಒಪ್ಪಿಸಿಕೊಳ್ಳಬೇಕು.''

"ಅಕ್ಕಟಕ್ಕಟಾ! ಇದೇನಿದು ಇವಳಿಗೆ ಈ ಉದಾಸೀನದ ಆಟ? ನನ್ನನ್ನು ಲಕ್ಷಿಸುವುದಿಲ್ಲವಲ್ಲಾ! ನಿನ್ನ ದೃಷ್ಟಿಗೆ ನಾನು ಯಾರೆಂದು ತೋರಿದೆನೆ?''

"ದೇವ, ನನ್ನ ದೃಷ್ಟಿಗೂ ನನ್ನ ಮನಸ್ಸಿಗೂ ನೀನು ಸಂಜೀವನವಾಗಿ ತೋರಿಬರುವೆ.''

"ಸಾಕು ಈ ಸುಳ್ಳಿನ ಆಟ'' ಎಂದು ಅರಸನು ಮುನಿದು, ಮುಖವನ್ನು ಅಡ್ಡ ತೆಗೆದನು.

"ಪದ್ಮಿನಿಯ ಪ್ರಾಣವನ್ನು ಸೂರೆಗೊಂಡ ಅರಸೆ, ನೀನು ಮುಖ ತಿರುವಿದರೆ ನಾನು ಬಿಡುವೆನೆ? ತಿರುಗು ಇತ್ತ'' ಎಂದು ಅರಸನ ಕೊರಳಿನ ಸುತ್ತ ತೋಳು ಸುತ್ತಿ, ಅವನನ್ನು ತನ್ನತ್ತ ತೆಗೆದಳು.

ತೆಗೆದಂತೆಯೇ ಮುಖವನ್ನು ಎದುರಿಗೆ ತಂದರೂ ಕಣ್ಣು ಮುಗಿದು ಮೌನದಲ್ಲಿದ್ದನು. ಅವನು ಕಣ್ಣು ಮುಗಿದಿದ್ದರೂ ಆ ಮುಖದ ಕಾಂತಿಯನ್ನು ನೋಡಿ, ನಗುತ್ತ ನಗುತ್ತ ಅವಳು ಅವನನ್ನು ಚುಂಬಿಸಿದಳು.

"ಪದ್ಮಿಯ ಪ್ರಾಣದೊಡೆಯನೆ ಕಣ್ದೆರೆ ಬೇಗ
ಪದ್ಮಿಯ ಸಿರಿಯೆ ಮಾತಾಡು
ಪದ್ಮಿನಿಗರ್ತಿದೋರೆ''ಂದು ಮುದ್ದಿಸಿ ಮುಖ—
ಪದ್ಮವ ತಡವಿ ನೋಡಿದಳು.

ಗಿಳಿಯಂತೆ ನುಡಿದಳು, ಬಳ್ಳಿಯಂತೆ ತಬ್ಬಿದಳು, ಇಳಿದು ಹರಿವ ಹೊಳೆಯಂತೆ ಗಳರವ ತೋರಿದಳು, ಮೈ ಅಲುಗಿಸಿ ಕಣ್ಣು ತೆರೆ ಎಂದು ಕಾಡಿದಳು.

ಅವಳು ಏನು ಮಾಡಿದರೂ ಮಿಸುಕದೆ, ಅರಸನು ಆತ್ಮಯೋಗದಲ್ಲಿದ್ದನು. ತಾನು ಕಾಲು ಕಟ್ಟಿಕೊಂಡು ಬೇಡಿದರೂ ಅರಸನು ಕಣ್ಣು ತೆರೆಯದುದನ್ನು ನೋಡಿ, ಪದ್ಮಿನಿ, "ಇದಕ್ಕೆ ತಕ್ಕ ತಂತ್ರವನ್ನು ನಾನೂ ಬಲ್ಲೆ" ಎಂದು, "ಅರಸೆ, ಕಣ್ಣು ತೆರೆ. ತೆರೆಯದೆ ಇದ್ದರೆ, ಚಿದಂಬರ ಪುರುಷನ ಮೇಲಾಣೆ." ಎಂದಳು.

ಅರಸನು ಮಂದಹಾಸದಿಂದ ಕಣ್ಣು ತೆರೆದನು. ಸದ್ಗುರುವಿನ ಆಣೆಯನ್ನು ಮೀರಲಾಗುವುದೆ!

ಕಣ್ಣು ತೆರೆದನು .... ಅದರ ಮುಂದೆ ಆದ ಅನುಭವವನ್ನು ಕನ್ನಡಿಸಿ ಹೇಳುವುದು ಜಾಣತನವಲ್ಲ. ಅದು ಇರಲಿ.

ಪದ್ಮಿನಿಯೊಡನೆ ಇಲ್ಲಿ ಹೇಗೆ ಇದ್ದನೋ ಹಾಗೆಯೇ ಆ ರಾಜಮೋಹಿ ಉಳಿದ ಪದ್ಮವದನೆಯರಲ್ಲೂ ಹಾಗೇ ತಪ್ಪದೆ ಕೂಡಿ ಆ ರಾತ್ರಿ ಇದ್ದನು.

೧೭

ಸ್ವಲ್ಪ ಹೊತ್ತಿನಲ್ಲೇ ಆತನಿಗೆ ಎಚ್ಚರವಾಯಿತು. ಉಳಿದ ಸತಿಯರ ಪಾರ್ಶ್ವದಲ್ಲಿದ್ದ ಶಾಖಾದೇಹಗಳು ನಿದ್ರಿಸಿದ್ದುವು. ಪದ್ಮಿನಿಯ ಬಳಿ ಮಾತ್ರ ಆ ಭಾವಿತಾತ್ಮನು ಕಣ್ತೆರೆದಿದ್ದನು. ಉಳಿದವರ ಒತ್ತಿನಲ್ಲಿ ಧ್ಯಾನದಲ್ಲಿ ಕಣ್ಣು ಮುಚ್ಚಿ ಮಲಗಿದಂತೆ ಇದ್ದನು; ಇಲ್ಲಿ ಮಾತ್ರ ಧ್ಯಾನಕ್ಕೆ ಎದ್ದು ಕುಳಿತನು.

ಮಂಚ ಅಲುಗದಂತೆ, ಮಾತಾಡದೆ, ಸತಿಯ ಮೈಯ ಅಂಚಿಗೆ ಒಂದು ತಲೆದಿಂಬನ್ನು ಒದಗಿಸಿ, ಅವಳ ನಿದ್ರೆ ಕದಲದಂತೆ ಆ ಚದುರನು ಎದ್ದನು. ಜಲದಿಂದ ಬಾಯಿ ಮುಕ್ಕುಳಿಸಿ, ವೀಳೆಯವನ್ನು ಕೊಂಡು, ಮತ್ತೆ ತಂಬುಲವನ್ನು ಉಗುಳಿ ಶುದ್ಧನಾಗಿ, ಕಮಲಾಸನದಲ್ಲಿ ಕುಳಿತು, ಕಣ್ಣುಗಳನ್ನು ಮುಚ್ಚಿ, ಆತ್ಮವನ್ನು ಕಂಡನು.

ಸದ್ದು ಗಲಭೆ ಎಂಬುದಿಲ್ಲ, ಆಗ. ಬೆಳಗಿನ ಐದು ಘಳಿಗೆ ಎಂದೆಂಬ ವೇಳೆ, ಅದು. ತಲೆಯಿಂದ ಕೆಂಪುಹೆಜ್ಜೆ ಮುಟ್ಟ ಆತ್ಮದ ಕಳೆ ಮೈಯೊಳಗೆ ತುಂಬಿ ಹೊಳೆಯಿತು.

ಬ್ರಾಹ್ಮಿ ಎಂದೆಂಬ ಮುಹೂರ್ತದ ಸನ್ನಿಧಿಯದು. ಬ್ರಹ್ಮಯೋಗಕ್ಕೆ ತಕ್ಕ ಕಾಲ. ಬ್ರಹ್ಮಮಾರ್ಗಕ್ಕೆ ವಾಯುವನ್ನು ನಡಸಿ, ಪರಬ್ರಹ್ಮವನ್ನು ತನ್ನೊಳಗೆ ಕಂಡನು.

ತರುಣಿಯರೊಡನೆ ಆಡಿ, ಸುಖನಿದ್ರೆಮಾಡಿ, ಆವರಿಸಿದ್ದ ಜಡವನ್ನು ಈಡಾಡಿ, ಕರಣಗಳು ಪಟುವಾಗಿದ್ದ ಆ ನೃಪನಿಗೆ ಆಗ ಎದೆಯಲ್ಲಿ ಪರಮಾತ್ಮ ಹೊಳೆದನು.

ಹಂಸತೂಲದ ತಲ್ಪದಲ್ಲಿ ಕುಳಿತು, ಹಂಸ ನೀರನ್ನು ಬಿಟ್ಟು ಹಾಲನ್ನು ಹಿಡಿಯುವಂತೆ, ದೇಹವನ್ನು ಬಿಟ್ಟು ಒಳಗೆ ಹಂಸನಾಥನನ್ನು ಕಂಡನು.

ನುಡಿಯಬಾರದ ಶಬ್ದ, ನೋಡಬಾರದ ವರ್ಣ, ಹಿಡಿಯಬಾರದ ಶೂನ್ಯರೂಪ ಎಂಬ ಆ ಪರಬ್ರಹ್ಮವಸ್ತುವನ್ನು ಆ ದೊರೆ ನುಡಿದನು, ನೋಡಿದನು, ಹಿಡಿದನು.

ತನುವನ್ನು ತೊಳೆದು, ತನುವನ್ನು ಒಣಗಿಸಿ, ಹೊರಗನ್ನೆ ಮೆಚ್ಚಿದ ಅಧಮರಿಗಾದರೆ ಅದು ಅಸಾಧ್ಯ. ಮನವನ್ನೆ ತೊಳೆದು, ಮನವನ್ನೆ ಒಣಗಿಸಿ, ಒಳಗನ್ನೆ ಮೆಚ್ಚಿದ ಉತ್ತಮನಿಗೆ ಅದು ಸಾಧ್ಯವಲ್ಲವೆ!

ಮಾನಿನಿ ತನ್ನ ಬಳಿಯೇ ಇದ್ದರೂ ಆ ರಾಜನು ಆತ್ಮದ ಪ್ರಭೆಯಲ್ಲಿ ಮುಳುಗಾಡಿ, ಅದರ ಸುಖದಲ್ಲಿ ಓಕುಳಿಯಾಡಿ, ಕರ್ಮಗಳ ಅಭಿಮಾನವನ್ನು ಕೆಡಿಸಿ, ಪ್ರಭು – ಕರ್ತೃ – ಭೋಕ್ತೃ ಎಂದೆಂಬ ಭೇದಭಿನ್ನಗಳನ್ನು ಮೀರಿ, ಹಂಸನಲ್ಲಿ ಇದ್ದನು.

ಭೂರಿ ಚಿಂತೆಯನ್ನು ಬಿಟ್ಟು, ತನ್ನನ್ನು ತಾನು ನೋಡುವಾಗ – ಕರ್ಮದ ದೂಳು ಸೋರಿಹೋಗುತ್ತಿತ್ತು; ಸುಜ್ಞಾನ ಸಂಗಡ ಸೇರುತ್ತಿತ್ತು; ಸುಖಿಗಳ ಆ ಆತ್ಮಾರಾಮನು ಆತ್ಮನಲ್ಲಿ ಇದ್ದನು.

ರಾಯನು ಹೀಗೆ ಧ್ಯಾನದಲ್ಲಿದ್ದನು.

ಆ ಸಮಯದಲ್ಲಿ, ಸೂರ್ಯ ಹುಟ್ಟುವ ವೇಳೆಯನ್ನು ಅರಿತು, ಗಾನಕಾಂತೆಯರು ಮೇಳವಾಗಿ ಬಂದು, ಆ ಪುಷ್ಕರಾವತಿಯ ಮನೆಮನೆಯ ಬಾಗಿಲಿನಲ್ಲೂ ತಪ್ಪದೆ ನಿಂತು, ಆಯೆಂದು ಪ್ರಾತಃಕಾಲದ ರಾಗದೋರಿದರು. ವೇಳಾವಳಿ, ಭೂಪಾಳಿ, ಗುಜ್ಜರಿ ರಾಗಗಳನ್ನು ಅಲ್ಲಲ್ಲಿ ಆಲಾಪಿಸಿ, ಮಲಗಿದ ಹೆಣ್ಣುಗಳನ್ನು ಏಳಿಸಿದರು, ಅವರ ಮೈಗಳಲ್ಲಿ ರೋಮಾಂಚಗಳನ್ನು ಏಳಿಸಿದರು.

"ಅರ್ಹಂತನ ನೆನಪಿಂದ ಪಾಪ ತೊಲಗುವಂತೆ ಧರೆಯ ಅಂಧಕಾರ ಜಾರುತ್ತಿದೆ. ಗುರುಭಕ್ತಿ ತೋರುವಂತೆ ಅರುಣೋದಯ ತೋರಿತು, ಅರಸೆ" ಎಂದು ಎತ್ತಿ ಹಾಡಿದರು.

"ನಕ್ಷತ್ರಗಳು ಮಾಸುತ್ತಿವೆ. ಮಂದಮಾರುತ ಬೀಸುತ್ತಿದೆ. ನಾರಿಯರ ನಳಿತೋಳ ತೆಕ್ಕೆಯಿಂದ ಏಳು, ವೈರಿರಾಜರೆಂಬ ಕತ್ತಲೆಗೆ ಸೂರ್ಯನಾದವನೆ!

“ಅರುಣನ ಉದಯವಾಗಿ ಕಿರಣವು ಕಾಣಿಸಿಕೊಂಡಿತು. ಸೂರ್ಯ ಕಾಣುವ ಮೊದಲೇ ನೀನು ಕಾಣಿಸಿಕೊಂಡು ಲೋಕವನ್ನು ಉದ್ಧರಿಸು, ಆದಿದೇವನ ಅಗ್ರತನೂಜಾ!

“ಚಿಂತೆಯಿಲ್ಲದಂತೆ ದೀರ್ಘರಾಜ್ಯವನ್ನು ಆಳುವ ನಿಶ್ಚಿಂತವೈಭವನೆ, ಎದ್ದೇಳು. ಚಿಂತಿಸಿದುದನ್ನು ಸರ್ವಜನಕ್ಕೆ ಕೊಡುವ ನೃಪವೇಷದ ಚಿಂತಾ ಮಣಿಯೆ, ಏಳೇಳು.

“ಹಗೆಯಿಲ್ಲದೆ ಭೂಮಿಯನ್ನು ಆಳುತ್ತ, ಬಹು ಸತಿಯರಿದ್ದರೂ ಅವರಲ್ಲಿ ಹುರುಡು ಬಾರದಂತೆ ಆಳುವ ನೀರಾ, ಹಗಲೂ ಇರುಳೂ ಎದೆಬೆಂದು ರಾಜ್ಯವನ್ನು ಆಳುವ ಇತರ ರಾಜರನ್ನು ಕಂಡು ನಗುತ್ತ, ಏಳು ರಾಜ ಮನೋಜಾ.

“ಭೋಗಕ್ಕೆ ಮರುಳಾಗಿ ಧರ್ಮವನ್ನು ಮರೆತು, ಅಧೋಗತಿಗೆ ಬೀಳುವವರನ್ನು ಹಾಸ್ಯಮಾಡುತ್ತ, ಭೋಗದಲ್ಲಿದ್ದರೂ ಯೋಗಿಗಳಂತೆ ಸುಖಿಯಾಗಿರುವ ಭೋಗಿಗಳ ಅರಸೇ, ನೀನೇಳು.

“ನಿನ್ನ ಸತಿಯರ ಎದೆಯ ಒಳಗನ್ನು ಅರಿವ ಪುರುಷೋತ್ತಮನೆ, ಕಣ್ಣು ತೆರೆ, ಸ್ವಾಮಿ. ಚಿತ್‌ತತ್ತ್ವದ ಅನುಭವರಾಜ್ಯವನ್ನು ಆಳುವ ರಾಜೋತ್ತಮನೆ, ಮೈಮುರಿದೇಳು.

“ಹಾಸಿಗೆಯಲ್ಲಿ ನಿನ್ನ ಮೈ ಮಲಗಿದೆ. ಚಿತ್ತವಾದರೋ ಹಂಸ ಕಳೆಯನ್ನು ಕೂಡಿರುವುದು. ನಿನಗೆ ನಿದ್ರೆ ಕವಿಯಲಾರದು. ಆದರೂ ಉಪಚಾರಕ್ಕೆ ಎದ್ದೇಳು, ಸುಜ್ಞಾನಸುಲಭಾ.

“ರವಿಯನ್ನು ಹೊರಗೆ ಕಂಡು, ತಮ್ಮ ಮೈಯೊಳಗಿನ ಆತ್ಮರವಿಯನ್ನು ಕಾಣದ ಕುರುಡರಿಗೆ ಪ್ರವರವಾದ ಆತ್ಮದೃಷ್ಟಿಯನ್ನು ಕೊಡುವ ಪ್ರತ್ಯಕ್ಷ ದೈವವೆ, ಬಿಜಯಮಾಡು, ಸ್ವಾಮಿ.

“ಸೂರ್ಯನು ಹುಟ್ಟಿ, ಭಾದ್ರಪದದ ಬಹುಳ ಚತುರ್ದಶಿ ಇಂದು. ಗೃಹರಾಜದಿಂದ ಎದ್ದು, ಜಿನಗೃಹಕ್ಕೆ ಮೆಲ್ಲಡಿಯಿಡುತ್ತ ಬಾ, ರಾಜ ಯೋಗೀಂದ್ರಾ”

—ಎಂಬುದಾಗಿ ಹಾಡುವ ಸುಪ್ರಭಾತಗೀತವನ್ನು ಕೇಳಿ, ಮಂದಿರ ಮಂದಿರದಲ್ಲೂ ನೆಲಸಿದ್ದ ತನ್ನ ಹಲವು ರೂಪನ್ನು ಬಯಲುಮಾಡಿ, ಒಂದೇ

ವ್ಶೈಯಲ್ಲಿ ನಿಂತನಾ ರಾಯ. ಮಂಚಮಂಚದಲ್ಲೂ ಹೆಣ್ಣುಗಳ ಕಣ್ಣಿಗೆ ತೋರಿದ ಮಿಂಚಿನಂತೆ ಬಯಲಾದುದನ್ನು ಆ ಹಂಸಗಮನೆಯರು ಕಂಡು, ಆಶ್ಚರ್ಯಪಟ್ಟು, ತಮ್ಮ ನಿತ್ಯಕೃತ್ಯಗಳಿಗೆ ತೊಡಗಿದರು.

ಮನಸ್ಸಿನ ಕಣ್ಣಿನಿಂದ ಶ್ರೀಗುರುಹಂಸನಾಥನ ಭಾವವನ್ನು ನೋಡಿ ಬೀಳ್ಕೊಂಡು, "ಶ್ರೀ ವೀತರಾಗ" ಎಂದು ಆ ಭಾವಿತಾತ್ಮರ ಶಿರೋರತ್ನನು ಕಣ್ತೆರೆದನು. ಉಳಿದ ರಾಜರು ಎದ್ದಾಗ ಹರಿತವಾದ ಖಡ್ಗವನ್ನೂ ಕನ್ನಡಿಯನ್ನೂ ತುಪ್ಪವನ್ನೂ ದರ್ಶನಮಾಡಿದರೆ, ಈ ಭರತರಾಜನು ಒಪ್ಪುವ ಹಂಸನಾಥನನ್ನು ನೋಡಿ, ಹಾಸಿಗೆಯಿಂದ ಎದ್ದನು.

ಸುಪ್ರಭಾತವನ್ನು ಕೇಳುತ್ತ, ಒಡನೆ ಎದ್ದು, ಪದ್ಮಿನಿಯ ಕೈಹಿಡಿದು, "ಸುಪ್ರಿಯೆ, ನೀನು ಜಿನಗೃಹಕ್ಕೆ ಮತ್ತೆ ಬಾ" ಎಂದು ಆ ಪ್ರಭು ಆ ಕ್ಷಣವೆ ಎದ್ದನು. ಎದ್ದವನು ಆ ಗೃಹರಾಜದಿಂದ ಹೊರಗೆ ಬಂದನು. ಆಗತಾನೆ ಪೂರ್ವಗಿರಿಯ ನೆತ್ತಿಗೆ ಬಂದ ಸೂರ್ಯನನ್ನು ಸಂದರ್ಶಿಸಿದನು.

# ಭಾಗ ಆರು: ಹಬ್ಬದ ಹಗಲು

## ೧

ಚಕ್ರವರ್ತಿಯು ಪೂಜೆಗೆ ಹೋಗುವ ಮೊದಲು ಸ್ನಾನಗೃಹಕ್ಕೆ ನಡೆದನು. ಅವನಿಗೆ ಭೋಗಮಜ್ಜನ, ಯೋಗಮಜ್ಜನ ಎಂದು ಎರಡು ರೀತಿಯ ಜಳಕ; ಭೋಗಕ್ಕಾಗಿ ಸ್ನಾನಮಾಡುವುದು ಭೋಗಮಜ್ಜನ, ಪೂಜೆಗಾಗಿ ಮಾಡುವುದು ಯೋಗಮಜ್ಜನ. ಭೋಗಮಜ್ಜನಕ್ಕೆ ಮೈ ಉಜ್ಜಬೇಕು, ತಿಕ್ಕಬೇಕು, ತುಂಬ ನೀರಾಗಬೇಕು, ಅದು ನಿದಾನವಾಗಿ ಆಗುತ್ತದೆ; ಯೋಗಮಜ್ಜನಕ್ಕಾದರೋ ಅಲ್ಪಜಲ ಸಾಕು, ಅದು ಬೇಗ ಮುಗಿಯುತ್ತದೆ. ಒಂದು ದಿವಸ ಭೋಗಮಜ್ಜನ, ಅದರ ಮರುದಿವಸ ಯೋಗಮಜ್ಜನ — ಈ ಪ್ರಕಾರವಾಗಿ ಆ ಭೋಗಿಗೆ ಪ್ರತಿದಿನ ತಪ್ಪದೆ ಮಜ್ಜನ ನಡೆಯುತ್ತಿದ್ದುದು.

ಮಂಗಲಾಂಗನಾದ ಆ ದೊರೆ ಬೇಗ ಯೋಗಮಜ್ಜನ ಮಾಡಿ, ಶೃಂಗಾರಶಾಲೆಯನ್ನು ಹೊಕ್ಕು ಶೃಂಗಾರ ಮಾಡಿಕೊಂಡನು; ಅನಂತರ ಅಂಗಜನನ್ನು ಭಂಗಪಡಿಸಿದ ಜಿನನ ಆಲಯಕ್ಕೆ ಮೆಲ್ಲನೆ ಅಡಿಯಿಟ್ಟನು. ಆ ಹೊಂಬಣ್ಣದ ಮೈಯಿನ ರಾಜನಿಗೆ ಮೋಹನಶೃಂಗಾರ, ಮೋಕ್ಷಶೃಂಗಾರ ಎಂದು ಎರಡು ತೆರದ ಶೃಂಗಾರ ಉಂಟು: ಸತಿಯರಿಗೆ ಮೆಚ್ಚಾಗುವುದಕ್ಕಾಗಿ ಮಾಡಿಕೊಳ್ಳುವ ಮೋಹನಶೃಂಗಾರ, ಮತ್ತು ಮೋಹಕ್ಕೆ ಎಡೆಕೊಡದ ಮೋಕ್ಷಶೃಂಗಾರ. ಈಗ ಮೋಕ್ಷಕಾರಣನಾದ ಜಿನನ ಪೂಜೆಗೆ ನಡೆಯುವಾಗ ಆ ರಾಜನು ಮೋಕ್ಷಶೃಂಗಾರವನ್ನು ಧರಿಸಿ, ಕಾಲೋಚಿತವಾದ ಲಕ್ಷಣ ತಪ್ಪದೆ ನಡೆದನು.

ತಲೆಯ ಕೂದಲಿನ ತಂಪು ಹೋಗುವಂತೆ ಸಿಕ್ಕುಬಿಡಿಸಿ ವಸ್ತ್ರದಿಂದ ಉಜ್ಜಿ, ಧೂಪವಿಕ್ಕಿದ ದೀರ್ಘಕೇಶವನ್ನು ತಿರಿಚಿ ಅಡ್ಡಸುತ್ತಿದ್ದನು. ದೊಡ್ಡ ಕೇಶವೆಂಬ ರಾಹುವಿನ ಮೈಮುಸುಕಿದ ಪರೆಯೋ ಅಥವಾ ಕಾಳಿಂದಿಯ

ನೊರೆಯೋ ಎಂಬಂತೆ ಆ ಕೂದಲಿನ ಮೇಲೆ ಒಂದು ಬಿಳಿಯ ತೆಳ್ಳನೆಯ ಚೀನಾಂಬರದ ಅಡ್ಡಸುತ್ತು. ಹಿಂದಿನ ದಿನದಂತೆ ಹಣೆಯಲ್ಲಿ ಕಿರಿದಾದ ತಿಲಕವಿಲ್ಲ; ಅದರ ಬದಲು, ಕರ್ಮಕಾಂಡವನ್ನು ತರಿದಿಕ್ಕುವ ಚಕ್ರವೋ ಅಥವಾ ಪೂರ್ಣಚಂದ್ರನೋ ಎಂಬಂತೆ ಶೋಭಿಸುವ ಧರ್ಮಚಕ್ರದ ಲಾಂಛನ ಹಣೆ ತುಂಬಿ ಮೆರೆಯುತ್ತಿತ್ತು. ಆಗ ಅವನು ಉಟ್ಟದ್ದು ಕೋಮಲವಾದ ದಟ್ಟಿಯಲ್ಲ, ಹಿಮ್ಮಡಿ ಮುಟ್ಟ ಪಟ್ಟೆಯ ಧೋತ್ರ ರಂಜಿಸಿತು. ಹೆಗಲಿನ ಮೇಲೆ ಬಿಟ್ಟ ಸೆರಗಿನ ಒಲ್ಲಿಯಲ್ಲ, ಹೆಗಲಲ್ಲಿ ಇಳಿಬಿದ್ದಿತ್ತು ದೊಡ್ಡ ಬಹಿರ್ವಾಸ. ಆಗ ಎದೆಯಲ್ಲೂ ಕೊರಳಲ್ಲೂ ಶ್ರೀಗಂಧರೇಖೆಯನ್ನು ತೀಡಿ ತಿದ್ದಿರಲಿಲ್ಲ; ಎದೆಗೆ ಸ್ವಲ್ಪ, ಕೊರಳೆಡೆ ಕೊಂಚ, ತೋಳಿಗೆ ಒಂದಿಷ್ಟು ಮಾತ್ರ ತೊಡೆದಿದ್ದ. ಎಲೆ ಅಡಿಕೆಯಿಂದಾಗಿದ್ದ ಹಲ್ಲಿನ ಕೆಂಪು ಹೋಗುವಂತೆ ತೊಳೆದು, ಹಲ್ಲು ಮಲ್ಲಿಗೆಯ ಮೊಗ್ಗಿನಂತೆ ಇದ್ದುವು. ಕುಂಡಲ, ಹಾರ, ವಜ್ರದ ಪದಕ, ಸಾಲುಗೊಂಡ ಮುತ್ತಿನ ಸರ, ಕಡಗ, ಪೆಂಡೆಯ, ಕಟಿಸೂತ್ರ, ಕೆತ್ತಿದ ಉಂಗುರ, ಬಳೆ, ತಾತಿಯ ಮಣಿ, ಸಣ್ಣ ಮುತ್ತಿನ ಯಜ್ಞೋಪವೀತ, ಎತ್ತಿದ ಭುಜಕೀರ್ತಿ, ಚಿನ್ನದ ಒಡ್ಡಿಯಾಣ ಇವುಗಳನ್ನು ಧರಿಸಿ ಆ ದೀರ್ಘದೇಹಿಯಾದ ದೊರೆ ಬರುತ್ತಿದ್ದರೆ, ಚಿನ್ನದ ಬೆಟ್ಟಕ್ಕೆ ನವರತ್ನದ ಕೀಲಣೆ ಮಾಡಿದ ಹಾಗಿತ್ತು. ಇತರ ಜನ ಮೆಟ್ಟಿದ ನೆಲವನ್ನು ಕಾಲಿಂದ ಮೆಟ್ಟದೆ, ಶುಚಿರ್ಭೂತನಾಗಿ, ಅರಳೆಯನ್ನು ಕೀಲಿಸಿದ ಬೆಳ್ಳಿಯ ಹಾವುಗೆಯನ್ನು ಮೆಟ್ಟಿ, ಅಧಿಕಶಾಂತಿಯಿಂದ ಬರುತ್ತಿದ್ದನು. ಆಗ ಅವನನ್ನು ಯಾರೂ ಹೊಗಳಬಾರದು, ಕಂಡವರು ಯಾರೂ ಕೈ ಮುಗಿಯಬಾರದು; ಆಗ ಅವನಿಗೆ ಛತ್ರವಿಲ್ಲ; ತನ್ನ ಚಕ್ರವರ್ತಿತನದ ಹೆಮ್ಮೆಯನ್ನು ತೆಗೆದಿಟ್ಟು, ಭಯಭಕ್ತಿಯಿಂದ ಸುಗತನಿವಾಸಕ್ಕೆ ನಡೆದನು. ಹೆಜ್ಜೆಹೆಜ್ಜೆಗೂ ಬಂದು ತನ್ನನ್ನು ಕೂಡಿಕೊಳ್ಳುವ ತನ್ನ ಕಜ್ಜಳದ ಕಣ್ಣಿನ ರಾಣಿಯರನ್ನು ನೋಡುತ್ತ, ಛಿದ್ರವಿಲ್ಲದ ಚಿತ್ತದಿಂದ ಆ ರಾಜನು ಗುಜ್ಜುಹೆಜ್ಜೆಗಳನ್ನು ಇಕ್ಕಿ ನಡೆದನು.

ಅವನು ಹೇಗೋ ಅವನ ರಾಣಿಯರೂ ಹಾಗೆಯೇ. "ಇಂದು ನಮ್ಮ ಪತಿಗೆ ಸಂಯಮ. ಆದ್ದರಿಂದ ನಾವೂ ಸಂಯಮದಿಂದ ಹೋಗಬೇಕು" ಎಂದು ತಾವೂ ಮಿಂದು, ತಮ್ಮ ಪುರುಷನಂತೆಯೇ ಮೋಕ್ಷ

ಶೃಂಗಾರವನ್ನು ಧರಿಸಿ ಹೊರಟರು. ಹಲ್ಲು ತೊಳೆದು, ಬಣ್ಣಬೆಳಕು ಬಿಟ್ಟು, ಬಿಗಿದು ಉಟ್ಟ ಬಿಳಿಯ ಬಟ್ಟೆ, ದುಕೂಲದ ರವಿಕೆ, ಚಂದನದ ಅಡ್ಡಬೊಟ್ಟು; ಓಲೆ, ಮೂಗುತಿ, ಬಳೆ, ಕಂಕಣ, ಚಿನ್ನದ ಎರಡು ತಾಳಿ, ಹಾರ ಇಷ್ಟು ಧರಿಸಿ, ಮೇಲೆ ಒಂದು ಆಭರಣವನ್ನೂ ತೊಡದೆ ಆ ಸುಶೀಲೆಯರು ಬಂದರು. ಅಡ್ಡಮುಡಿ, ಸೋರುಮುಡಿ, ದೊಡ್ಡಮುಡಿ, ತೆಕ್ಕೆತುರುಬು ಮುಂತಾದ ಶೃಂಗಾರದ ತುರುಬುಗಳನ್ನು ತೋರದೆ ಬೇಸರುಮುಡಿಗಟ್ಟಿ ಬಂದರು. ಕೆಲವರು ಕಲಿಗಂಟಿಕ್ಕಿ, ಕೆಲವರು ಜಡೆ ಹಾಕಿ, ಕೆಲವರು ಸುಮ್ಮನೆ ತುರುಬುಸುತ್ತಿ–ಜಡೆಬಿಲ್ಲೆ, ಚವಲಿ, ಬೈತಲೆಯ ಮಣಿ, ಮುತ್ತಿನ ಬಲೆ ಒಂದೂ ಇಲ್ಲದೆ ಒಪ್ಪವಾಗಿ ಬಂದರು. ದೊರೆಯ ಆ ಪತ್ನಿಯರು ನೋಟದಿಂದ ತಮಗೆ ಮನ್ಮಥತಾಪ ಏಳದಂತೆ ವಿಸ್ತಾರವಾದ ಆ ಮೋಹಶೃಂಗಾರವನ್ನು ಬಿಟ್ಟು ಬಂದರು. 'ಹೊರೆಹೊರೆಯಾಗಿ ಫಲವಸ್ತು ಹಿಂದೆ ಬರುತ್ತಿದೆ. ಆದರೂ ಬರಿಗೈಯಲ್ಲಿ ಹೋಗುವುದು ಬೇಡ' ಎಂದು ಚಿಕ್ಕದೊಂದು ಹೂ ಹಣ್ಣು ಹಿಡಿದು ಆ ಕಾಂತೆಯರು ಬಂದರು. ಭರತರಾಜನೂ ಆ ಕಾಂತೆಯರೂ ಅನ್ಯೋನ್ಯವಾಗಿ ನೋಡಿ ವಿನಯವನಾಡುತ್ತ ಬಂದರೂ ಅವರು ಯಾರ ಮನಸ್ಸಿನಲ್ಲಿಯೂ ವಿಕಾರಗಳುಂಟಾಗಲಿಲ್ಲ.

ಹೀಗೆ ಅರಸಿಯರ ಮಧ್ಯೆ, ಮಿಂಚುವ ಮಾದಲವನ್ನು ಕೈಯಲ್ಲಿ ಹಿಡಿದು, ಅರಸನು ಪಾಪಹರವಾದ ಅಧ್ಯಾತ್ಮಗಾನಮಂಗಲವನ್ನು ಕೇಳುತ್ತ ಬಂದನು. ಪರಿಪರಿಯಾದ ಅರ್ಚನಾದ್ರವ್ಯಗಳನ್ನು ಹೊತ್ತ ಪರಿವಾರ ಸತಿಯರ ಹಿಂದೆ ಎರಡು ಪಕ್ಕದಲ್ಲೂ ಗಾನ ನಡೆಯುತ್ತಿತ್ತು. ಮುಂದುಗಡೆ ಶಂಖ ಭುಂಭುಂ ಎಂದು ಮೊರೆಯಿತು.

ಅರಮನೆಯ ಪಕ್ಕದ ಶ್ರೀವನದಲ್ಲಿರುವ ಪುರುಜಿನನ ಆಲಯಕ್ಕೆ ಹೆಜ್ಜೆಯಿಟ್ಟು, ಪ್ರಾಕಾರದ ಕೋಟೆಯ ಪಕ್ಕದಲ್ಲಿ ಹಾವುಗೆಗಳನ್ನು ಕಳೆದಿರಿಸಿ, ಒಳಗೆ ಪ್ರವೇಶಿಸಿದನು. ಮಾನಸ್ತಂಭವನ್ನು ತನ್ನ ಬಲಕ್ಕೆ ಬಿಟ್ಟುಕೊಂಡು, ಶುಚಿರ್ಭೂತೆಯರಾದ ಆ ಮಾನಿನಿಯರೊಡನೆ ಗಗನವನ್ನು ಮುಟ್ಟುವ ಮೂರು ಚಿನ್ನದ ಕೋಟೆಗಳನ್ನು ದಾಟಿ, ಆ ದೊರೆಯು ಜೈನೇಂದ್ರನಿವಾಸವನ್ನು ಕಂಡನು.

ರಾಜನ ಅರಮನೆ ರತ್ನದಿಂದಾದದ್ದು, ಚಿನ್ನದಿಂದಾದದ್ದು ಎಂದಮೇಲೆ ತನ್ನ ದೇವನ ಮನೆಯನ್ನು ಚಿನ್ನರತ್ನಗಳಿಂದ ಮಾಡಿಸಿದ ಎಂದು ಬೇರೆಯಾಗಿ ಹೇಳಬೇಕೆ? ಮಂದರಪರ್ವತದಂತೆ, ತೀರ್ಥಂಕರನ ಸಮವಸರಣದಂತೆ, ಸರ್ವಾರ್ಥಸಿದ್ಧಿಯಂತೆ, ನಾನಾರತ್ನಗಳನ್ನು ಕುಂದಣವಿಟ್ಟ ಬೆಟ್ಟದಂತೆ ಆ ಜಿನನಿವಾಸ ಇತ್ತು.

ಸಕಲಸಂಪತ್ತಿನ ಬೀಡೆನ್ನಿಸುವ ಆ ಬಸದಿಯನ್ನು ಆ ದೊರೆಯು ತನ್ನ ರಾಣಿಯರೊಡನೆ ತ್ರಿಕರಣಶುದ್ಧಿಯಿಂದ, ಮುಗಿದ ಕೈಮೊಗ್ಗೆಗಳಿಂದ, ಮೂರು ಸಲ ಪ್ರದಕ್ಷಿಣೆ ಮಾಡಿದನು. ಕಾಲು ತೊಳೆದು, ಒಳಗೆ ಪ್ರವೇಶಿಸಿ, ಆದಿಜಿನನ ಬಿಂಬವನ್ನು ಕಂಡನು. ದರ್ಶನಾಂಜಲಿಯೆಂದು ಚಿನ್ನದ ಹೂವನ್ನು ಬೊಗಸೆ ತುಂಬಿ ಅರ್ಪಿಸಿ, ಕೈಮುಗಿದು ನಿಂತು ಕೀರ್ತಿಸಿದನು :

"ಕೈವಲ್ಯಬೋಧವೆಂಬ ಮಹಾರಾಜ್ಯದ ಒಡೆಯನಾದ ದೇವಾಧಿದೇವನ ಪಾವನ ಬಿಂಬವೆ, ಜಯಜಯ! ಆದಿದೇವನ ಚೆಲ್ವುಬಿಂಬವೆ, ಜಯಜಯ! ಶ್ರೀ ಮುಕ್ತಿಯೊಡೆಯನ, ಸಿದ್ಧಾಂತವಾಕ್ಯನ, ಕಾಮಿತಸಿದ್ಧಿದಾಯಕನ ಶ್ರೀಮಯ ಪ್ರತಿಮೆಯೆ, ಜಯಜಯ! ನನ್ನ ಸ್ವಾಮಿಯ ಪ್ರತಿಮೆಯೆ, ಜಯಜಯ! ಕೋಟಿಚಂದ್ರಸೂರ್ಯರ ಪ್ರಕಾಶನ, ತ್ರಿಭುವನ ರಾಜರೊಡೆಯನ, ಚಿನ್ಮಯನ ರಾಜಿತರೂಪೆ, ಜಯಜಯ! ಭರತನ ಅಪ್ಪಾಜಿಯ ಪ್ರತಿರೂಪೆ, ಜಯಜಯ!"

—ಎಂದು ಕೀರ್ತಿಸಿ, ಮತ್ತೆ ಆದಿಜಿನನಿದ್ದ ಕೈಲಾಸಗಿರಿಗೆ ಒಲವಿಂದ ಚಿತ್ತವನ್ನು ನೀಡಿ, ಮೈಯನ್ನು ಮಂದಿರದಲ್ಲಿ ನೀಡಿ, ಮೂರು ಬಾರಿ ನಮಸ್ಕರಿಸಿ, ಆದೀಶನಿಗೆ ಭಕ್ತಿಯನ್ನು ಸಲ್ಲಿಸಿದನು. ಅನಂತರ ದರ್ಭಾಸನದಲ್ಲಿ ಕುಳಿತು, ಸಂದರ್ಭಕ್ಕೆ ತಕ್ಕ ಕ್ರಿಯೆಗಳನ್ನು ನಡಸಿ, ಶುಚಿರ್ಭೂತನಾಗಿ ಜೈನ ದೇವತೆಗೆ ಅರ್ಘ್ಯವನ್ನು ಕೊಟ್ಟನು. ಸ್ತೋತ್ರ ಮಾಡಿದನು, ಜಪ ಮಾಡಿದನು, ಕಣ್ಣು ಮುಚ್ಚಿ ಆತ್ಮನಲ್ಲಿ ಆದಿಜಿನನನ್ನು ಕಂಡನು.

ಅನೇಕ ವೀಣೆಗಳನ್ನು ಏಕಕಾಲದಲ್ಲಿ ಮಿಡಿದರೋ ಎಂಬ ಹಾಗೆ ರಾಣಿಯರೆಲ್ಲರೂ ಸ್ತುತಿಸುತ್ತಿದ್ದರು ; ವೀಣೆಗೆ ಪ್ರತಿವೀಣೆ ಕೂಡಿದಂತೆ ಮಾಣಿಕ್ಯದ ಬಸದಿಯೂ ಮಾತನಾಡುತ್ತಿತ್ತು. ಹಿರಿಯ ವಿಶಾಲದ ಬಸದಿ

ಯಲ್ಲಿ ಎಲ್ಲರೂ ಸಾಲುಸಾಲಾಗಿ ಕುಳಿತು ಸ್ವರತೋರಿ ಸ್ತುತಿಮಾಡುತ್ತಿದ್ದರೆ, ದುಂಬಿಯ ನೆರವಿ ಗಲಭೆ ಮಾಡಿದ ಹಾಗಿತ್ತು. ಪ್ರಾಕೃತದಲ್ಲಿ, ಸಂಸ್ಕೃತದಲ್ಲಿ, ಕರ್ನಾಟವಾಕ್ಕಿನಲ್ಲಿ ಪರಮಪ್ರೀತಿಯಿಂದ ಆದಿಜಿನನ ಆಕಾರಸ್ತುತಿ ವಸ್ತು ಸ್ತುತಿ ಗುಣಸ್ತುತಿಗಳನ್ನು ಮಾಡಿದರು – ಮಾವಿನ ಮರದ ಅರಗಿಳಿಯಂತೆ. ಪೈಶಾಚಿಕ ಭಾಷೆಯಲ್ಲಿ, ಮಾಗಧಿಯಲ್ಲಿ, ಶೂರಸೇನಿಯಲ್ಲಿ ಅರುಹನನ್ನು ವಿಶಾಲವಾಗಿ ಸ್ತುತಿಸಿದರು — ವೈಶಾಖಮಾಸದ ಕೋಗಿಲೆಯಂತೆ.

"ದೇವದೇವೋತ್ತಮ! ದೇದೀಪ್ಯಮಾನ ದೇಹಾವಲಂಬನ! ದೇವರತ್ನಾ! ಮಾಹಾಜಿ! ಜಯಜಯಾ!" ಎಂದು ದೇವಾಧಿದೇವನ ಸೊಸೆಯರು ಅರ್ತಿಯಿಂದ ಹಾಡಿದರು.

"ಸಾವಿಗೂ ಹುಟ್ಟಿಗೂ ಸಿಕ್ಕಿ ಸಂಕಟಪಡುವ ನಮ್ಮ ನೋವೆಲ್ಲವನ್ನು ಸುಗ್ಗೊತ್ತಿ, ನಮ್ಮನ್ನು ಕಾಪಾಡಬೇಕು, ಸ್ವಾಮೀ!" ಎಂದು ಆ ತ್ರಿಭುವನ ದೇವನ ಮಗನ ರಾಣಿಯರು ಬೇಡಿದರು.

"ನಿನ್ನ ಕುಮಾರನಂತೆ ನಮಗೆ ಶುದ್ಧಾತ್ಮದ ಯೋಗೋನ್ನತಿ ಬಾರದು, ಸ್ವಾಮಿ. ನಿನ್ನನ್ನೇ ನಂಬಿರುವೆವು" ಎಂದು ಆ ಸಮ್ಯಕ್ತ್ವ ಶೀಲಸಂಪನ್ನೆಯರು ಸ್ತುತಿಸಿದರು.

"ಭೇದವಿಲ್ಲದ ಭಕ್ತಿಯ ಅಭ್ಯಾಸಕ್ಕೆ ನಮಗೆ ಶಕ್ತಿ ಸಾಲದು. ನಮ್ಮ ಧ್ಯಾನದಲ್ಲಿ ನಮಗೆ ಆ ಸಾಮರ್ಥ್ಯವನ್ನು ಕರುಣಿಸು, ಕೈಲಾಸದೊಡೆಯ! ಈ ಸ್ತ್ರೀವೇಷ ಕಷ್ಟ. ಮುಕ್ತಿಯಿಲ್ಲದಿದ್ದರೇನು, ಶಿಷ್ಟವಾದ ಆತ್ಮಯೋಗ ವನ್ನು ತೋರಿದರೆ, ಈ ಹೆಣ್ಣುಜನ್ಮವನ್ನು ನಷ್ಟಮಾಡುವೆವು" ಎಂದು ಆ ಸದ್ದೃಷ್ಟಿಯ ಸತಿಯರು ಆಡಿದರು.

೨

ಅಷ್ಟರಲ್ಲಿ ರಾಜ ಕಣ್ಣು ತೆರೆದನು, ಎದ್ದನು. ಅಂಗನೆಯರೂ ಅವನ ಕೂಡೆ ನಡೆದರು. ಮುನಿಗಳ ವಾಸಸ್ಥಾನಕ್ಕೆ ನಡೆದುಹೋಗಿ, ಅರಸನು ಅರಸಿಯರೊಡನೆ ಮುನಿಗಳಿಗೆ ವಂದನೆಮಾಡಿದನು. ಆ ಜಿನಮುನಿಗಳ ಸಮಕ್ಷದಲ್ಲಿ ಆ ವನಜಮುಖಿಯರು ದಿನವ್ರತ, ದಿಗ್ವ್ರತ, ಮಿತಪರಿಗ್ರಹ

ವ್ರತ, ಅನಶನವ್ರತ ಇವುಗಳನ್ನು ಕೈಕೊಂಡರು. 'ಪಾಪದ ಸೋಂಕಿಲ್ಲದ ಧರ್ಮಾಂಗದ ನುಡಿಯುಂಟು, ನೋಟವುಂಟು, ನಗೆಯುಂಟು; ಸುರತದ ಸುದ್ದಿ ಇಂದು ಬೇಡ' ಎಂದು ಅರಸನು ಅರಸಿಯರು ಸಹಿತವಾಗಿ ವರಬ್ರಹ್ಮ ಚರ್ಯವನ್ನು ಕೈಕೊಂಡು ಕಂಕಣವನ್ನು ಧರಿಸಿದನು. 'ಪೂಜೆಯನ್ನು ನೋಡಲು ಚಿತ್ತೈಸಬೇಕು' ಎಂದು ಮುನಿಗಳನ್ನು ಬೇಡಿಕೊಂಡು, ಮತ್ತೆ ಜಿನಾಲಯಕ್ಕೆ ಹಿಂದಿರುಗಿದನು.

ಅಲ್ಲಿ ಆ ಚಕ್ರವರ್ತಿ ತನ್ನ ಕೈಯಾರ ತಾನೇ ಆದಿಜಿನನ ಬಿಂಬಕ್ಕೆ ಅಭಿಷೇಕಮಾಡತೊಡಗಿದನು.

ನಾಲ್ಕುಮುಖವಾದ ಆ ದೇವಾಗಾರದ ಪೂಜೆಗೋಸ್ಕರ ತಾನು ನಾಲ್ಕು ಕೈಗಳನ್ನು ತಾಳಿ, ಆ ಬಲ್ಮೆಕಾರನು ನಲ್ಮೆಯಿಂದ ನಾಲ್ಕು ದಿಕ್ಕಿನಲ್ಲೂ ನಿಂತನು. ದೊಡ್ಡದೊಡ್ಡ ಅಪರಂಜಿ ಕಲಶಗಳನ್ನು ಅಷ್ಟವಿಧಾರ್ಚನೆ ಯಿಂದ ಸತ್ಕರಿಸಿ, ಮಾವಿನ ಚಿಗುರಿನ ಮೇಲೆ ಹಣ್ಣನ್ನು ಇರಿಸಿದಂತೆ, ಕೈಯಿಂದ ಬಾಚಿಹಿಡಿದನು. ತನ್ನ ದೀರ್ಘಬಾಹುಗಳನ್ನು ಎತ್ತಿ, ಆ ದೇವಾಗಾರಕ್ಕೆ ಅಭಿಷೇಕದ ಮಳೆಯನ್ನು ಕರೆದನು. ಆ ಹೊತ್ತಿಗೆ ಹೊರಗೆ ಶಂಖಭೇರಿಕಹಳೆಗಳ ನಿರ್ಘೋಷ ಹೆಚ್ಚಿತು. ಮುನಿಗಳೂ ಅಜ್ಜಿಯರೂ ಅರಸಿಯರೂ ನಾಲ್ಕೂ ಬಾಗಿಲುಗಳಲ್ಲಿ ನಿಂತು ಕೈಮುಗಿದು, ಸಮುದ್ರ ಮೊರೆಯುವಂತೆ 'ಜಯಜಯಾ!' ಎಂದರು. ಉತ್ಸವ ಆರಂಭವಾಯಿತು.

ಆ ಜಿನಬಿಂಬ, ಐನೂರು ಮಾರುದ್ದ, ಸುಖಾಸನದಲ್ಲಿ ಆಡಕವಾಗಿತ್ತು. ಅಷ್ಟು ಉದ್ದವಾದರೂ ಅದೇನೂ ಬೇತಾಳರೂಪವಲ್ಲ; ಆ ಉದ್ದಕ್ಕೆ ಅನುರೂಪ ವಾದ ತೋರ. ಕೈಕಾಲು ದೇಹದ ಕಾಂತಿಗೆ ಹೊಂದಿಕೊಂಡು, ಪುರುಷ ಪ್ರಮಾಣವ ಹಾಗಿರುವುದು, ಆ ಬಿಂಬ. ಆ ದೀರ್ಘವಾದ ಬಸದಿಗೆ ತಕ್ಕ ದೀರ್ಘವಾದ ದೇವಾಗಾರ, ಆ ದೀರ್ಘವಾದ ದೇವಾಗಾರಕ್ಕೆ ತಕ್ಕ ಆ ದೀರ್ಘದೇಹಿ ಆದರದಿಂದ ಆದಿಜಿನನಿಗೆ ಮಜ್ಜನವನ್ನು ಆರಂಭಿಸಿದನು.

ಆಕಾಶ ಬಿರಿದು ಮೋಡಗಳು ಕನಕಾದ್ರಿಗೆ ಮಳೆಕರೆಯುವಂತೆ, ಮೊದಲು ಜಿನನಿಗೆ ಸ್ವಚ್ಛಜಲದಿಂದ ಅಭಿಷೇಕಮಾಡಿದನು. ಅನಂತರ, ಗಗನಗಂಗೆಯ ನೀರನ್ನು ಪಚ್ಚೆಯ ಕೊಡದಿಂದ ಮೊಗೆದು ಮೊಗೆದು ಎರೆಯುವಂತೆ ಜಿನನಿಗೆ ಗಗನವನ್ನು ತುಡುಕುವ ನಿಡುದೆಂಗಿನ ಎಳನೀರನ್ನು

ತೆಗೆದುತೆಗೆದು ಅಭಿಷೇಕಮಾಡಿದನು. ಅದಾದ ಮೇಲೆ, ಹಾಲಿನ ಕಡಲಲ್ಲಿ ತೇಲುವ ನೊರೆಯೆಲ್ಲ ಅಲೆಗಟ್ಟಿ ಅಂಗೈಗೆ ಬಂದು ಜಾರಿತೋ ಎಂಬಂಥ ತೆಂಗಿನಕಾಯಿ ತೂರೆಗಳನ್ನು ಆ ಭೂಪನು ದೇವನಿಗೆ ಅಭಿಷೇಕಮಾಡಿದನು. ಆ ಬಳಿಕ, ತಾಳೆಯ ಹೂವಿನ ಎಸಳೊ ಎಂಬಂತೆ ಸುಲಿದ ಇಂಪುಬಾಳೆಯ ಹಣ್ಣನ್ನು ಆ ರಾಯನು ಆ ಪ್ರತಿಮೆಯ ಭುಜನುಟ್ಟಿ ಮೆದೆಗಟ್ಟಿ ಹೊಳೆಯು ವಂತೆ ಅಭಿಷೇಕಮಾಡಿದ. ಮತ್ತೆ, ಹಾಕಿ ಹಿಡಿದರೆ ಹಿಡಿತಕ್ಕೆ ಸಿಕ್ಕದೆ, ಹಸ್ತಪುಟದ ಅತ್ತಿತ್ತ ಚೆಲ್ಲುವ ಪುಟದ ಸಕ್ಕರೆಯಲ್ಲಿ ಅಭಿಷೇಕವಿಧಿಯನ್ನು ನೆರವೇರಿಸಿದನು. ಮುಂದೆ, ಮನ್ಮಥನು ನಾಚಿ ಜಿನನ ಎದುರು ತನ್ನ ಕಬ್ಬಿನ ಬಿಲ್ಲನ್ನು ಹಿಸುಕಿ ಬಿನಾಡಿಹೋದನೋ ಎಂಬಂಥ ರಸದಾಳಿ ಕಬ್ಬಿನ ರಸವಲ್ಲಿ ಆ ನೃಪತಿ ಜಿನನನ್ನು ಮೀಯಿಸಿದನು. ಪುನಃ ಕಂಬಿಕಂಬಿಯಲ್ಲಿ ಬಂದು ಇಳಿಸಿದ್ದ ಕೋಟಿಕಾಕಂಬಿಯ ರಸವನ್ನು ಎರೆದನು ; ಎರೆದವರೆ, ಅಚ್ಚ ಅಪರಂಜಿಯ ಪ್ರತಿಮೆ ಒಡನೆಯೆ ಹೊಸ ಪಚ್ಚೆಯ ಪ್ರತಿಮೆಯಂತಾಯಿತು. ಆಮೇಲೆ, ಬಿಸಿಬಿಟ್ಟು ತಂಪು ಕಂಪು ಎಸೆವ ಅಪರಂಜಿಯ ರಸವನ್ನು ಎರೆವನೊ ಎಂಬಂತೆ ಆ ರಾಜಸಿಂಹನು ಹಸನಾದ ತಿಳಿ ತುಪ್ಪದಿಂದ ಅಭಿಷೇಕ ಮಾಡಿದನು ; ಆ ತಿಳಿ ತುಪ್ಪವನ್ನು ಎರೆದಾಗ ಚಿನ್ನದ ರಸದ ಒಂದು ಹೊಳೆ ಹರಿದಂತೆ ಶೋಭಿಸಿತು. ಬಲು ಹೆರೆದುಪ್ಪ ಬರುವಾಗ ಹಾಲು ಕಡಲಿನ ನುಣುಪಾದ ಮರುಳು ಇಳಿವಂತೆ ರಂಜಿಸಿತು. ಹಾಲಿನ ಸಮುದ್ರ ಮೇಲೆ ಕವಿಯಿತೊ ಎಂಬಂತೆ ಹದವಾಗಿ ಕಾಯಿಸಿದ ಕಂಪಿನ ಹಾಲಿನಿಂದ ಅಭಿಷೇಕಮಾಡಿದರೆ, ಆ ಹಾಲಿನ ಧಾರೆಗಳು ಬುಡುಬುಡು ಭೋರ್ಭೋರ್ಗರು ಝುಳ್ಳುಝುಳ್ಳೆನುತ್ತ ಘುಮುಕಿ ತೊರೆತೊರೆಯಾಗಿ ಇಳಿದುವು. ದೃಷ್ಟಿಗೆ ಬಿಳುಪನ್ನು ತುಂಬುತ್ತಾ ತೆಂಗಿನ ಗುಂಡುಗುಂಡಾದ ಎಳೆಗಾಯಂತೆ ಮೆರೆಯುವ ಘಟ್ಟಿಮೊಸರಿನಿಂದ ಆ ಮೂರ್ತಿಗೆ ಅರ್ತಿಯಿಂದ ಅಭಿಷೇಕ ಮಾಡಿದನು. ಹಾಲುಕಡಲಿಗೆ ಹೆಪ್ಪನ್ನಿಕ್ಕಿ ಮೊಸರುಕಡಲನ್ನೇ ತಂದರೋ ಎಂಬಂತೆ ಮೊಸರಭಿಷೇಕ ಮನೋಹರವಾಯಿತು.

ಹೀಗೆ ಕಡೆಯಿಲ್ಲದ ಅಮೃತದ ಮಳೆಯನ್ನು ಕರೆದನು. ಆ ತೊರೆ ಉಕ್ಕಿ ಬರುವಾಗ, ಬಸದಿ ಪಂಚವಜ್ರಾಂಗವಾಗಿದ್ದುದರಿಂದ ನಿಂತಿತೇ ಹೊರತು, ಅಲ್ಲದಿದ್ದರೆ ನೆಲ ಕೊರೆದುಹೋಗುತ್ತಿತ್ತು.

ತೆಂಗಿನಕಾಯ ತೂರೆಯನ್ನು ಒಮ್ಮೆ ಭುಜಮುಟ್ಟ ಮೆದೆ ಹಾಕುವನು, ಅದನ್ನು ಒಯ್ಯಾರದಿಂದ ತೆಗೆಸುವನು; ಬೊಗಸೆಬೊಗಸೆ ಸಕ್ಕರೆ ರಾಶಿ ಹಾಕುವನು, ಪರಿಚಾರಕ ಸ್ತ್ರೀಯರಿಂದ ತೆಗೆಸುವನು. ಹಣ್ಣು ತೆಗೆಯುವರು, ಹಾಲುಮೊಸರು ತೆಗೆಯುವರು, ಹೊಂಬಣ್ಣದ ತುಪ್ಪವನ್ನು ತೆಗೆಯುವರು, ಕಣ್ಣುರೆಪ್ಪೆ ಹೊಯ್ಯುವುದರೊಳಗೆ ಊಳಿಗದ ಹೆಣ್ಣುಗಳು ಅದನ್ನು ಒಪ್ಪ ಮಾಡುವರು.

ಹೀಗೆ ಪ್ರೀತಿಯಿಂದ, ಕ್ರಮವಾಗಿ, ಆಚಾರ ಕೆಡದೆ ಮಂತ್ರಾರ್ಥದ ಉಚ್ಚಾರಮಾಡುತ್ತ, ತೀರ್ಥದ ಜಲ ಮೊದಲಾಗಿ ಮೊಸರು ಕಡೆಯಾಗುವ ವರೆಗೂ ಒಳ್ಳೆಯ ವಸ್ತುಗಳನ್ನು ಸ್ವಾಮಿಗೆ ಅಭಿಷೇಕಮಾಡಿದನು. ಅನಂತರ, ಜಿನನ ಪ್ರತಿಮೆಗೆ ಮೇಲೆ ಹೇಳಿದ ಐದು ವಿಧದ ಅಮೃತಧಾರೆಯನ್ನು ಅಭಿಷೇಕಮಾಡಿ, ಕಡೆಗೆ ಘಮಘಮಿಸುವ ದಿವ್ಯವಾದ ಪರಿಮಳಗಳನ್ನು ಎರೆದನು. ಚಂದನದ ಗಂಧವನ್ನು ಕೋಟಿಕುಂಭಗಳಲ್ಲಿ ಎತ್ತಿ ದೇವನ ಪ್ರತಿಮೆಗೆ ಎರೆದನು. ಸಾವಿರ ಕೋಟಿ ಕೊಪ್ಪರಿಗೆಯ ಪನ್ನೀರನ್ನು ತೊರೆಯಾಗಿ ತುಂಬಿ ಹರಿಸಿದನು. ಪೂರ್ಣಕುಂಭವನ್ನೆತ್ತಿ, ಲೋಕದ ಸಂತಾಪ ನಿರ್ನಾಶವಾಗುವ ರೀತಿಯಲ್ಲಿ, ಶಾಂತಿಮಂತ್ರವನ್ನು ವರ್ಣಶುದ್ಧ ವಾಗಿ ಓದಿ, ಅಭಿಷೇಕಮಾಡಿದನು. ಹಲವು ಬಣ್ಣದ ಹೂವು ತುಂಬಿದ ನೂರೆಂಟು ಬುಟ್ಟಿಗಳನ್ನು ಎತ್ತಿ ಚೆಲ್ಲಿದನು; ಪಳಪಳನೆ ಇಳಿಯುವ ಆ ಹೂ ಮಳೆಯನ್ನು ಕಂಡು, ಎಲ್ಲರೂ "ಜಯಜಯ!" ಎಂದು ಕೂಗಿದರು. ಪ್ರತಿಮೆಯ ಭುಜಮುಟ್ಟ ನಿಲ್ಲುವಂತೆ ಬೆಳ್ಳಿಯ ಹೂಗಳನ್ನೂ ಚಿನ್ನದ ಹೂಗಳನ್ನೂ ಸುರಿದನು; ನಿಂತ ನೆರವಿ ಜಯಕಾರಮಾಡಿತು. ಬಳಿಕ ಪ್ರತಿಮೆಗೆ ಅಷ್ಟವಿಧದ ಅರ್ಚನೆಯನ್ನು ಮಾಡಿ, ಅರಳಿದ ನೂರೆಂಟು ತಾವರೆಗಳ ಮಂತ್ರಪುಷ್ಪವನ್ನು ಇಕ್ಕಿ, ಅರಸನು ಕೈಮುಗಿದನು.

ಆಗ ವಾದ್ಯಗಳ ಸದ್ದು ನಿಂತು ಸುಮ್ಮನಾಯ್ತು.

ಪೂಜೆ ಮುಗಿದ ಮೇಲೆ ಆ ನೃಪತಿ ತನ್ನ ಸತಿಯರೊಡನೆ ತಾಪಸ ಗೋಷ್ಠಿಗೆ ಪಾದಪೂಜೆ ಮಾಡಿ, "ನಮೋಸ್ತು" ಎಂದನು. ಆಚಾರ್ಯನು "ಪರಮಾತ್ಮ ಸಿದ್ಧಿರಸ್ತು" ಎಂದನು. "ಧರ್ಮವೃದ್ಧಿರಸ್ತು" ಎಂದರು ಮಿಕ್ಕ ತಾಪಸರು.

ನೆರೆದಿದ್ದ ಸಭೆಗೆಲ್ಲ ಅಭಿಷೇಕದ ಗಂಧದ ಜಲವನ್ನು ಕೊಡುವ ವೇಳೆಗೆ ನಡುಹಗಲಿನ ಸನ್ನೆಯಾಯಿತು. ರಾಜನು ಆ ದಿವಸ ಅಲ್ಲಿಯೇ ತನ್ನ ರಾಣಿಯರೊಡನೆ ಜಾಗರವಿರುವನೆಂದು ಎಲ್ಲರೂ ಅಲ್ಲಿಂದ ಅಪ್ಪಣೆಪಡೆದು ಹೊರಟರು. ಲೋಕಾಂತ ಹೋಯಿತು, ಏಕಾಂತವಾಯಿತು; ಆ ವ್ರತವನ್ನು ಕೈಕೊಂಡ ಸತಿಯರೊಡನೆ ಧರ್ಮದ ಮಾತುಕತೆಯಾಡುತ್ತ ಭೂಕಾಂತನಿದ್ದನು.

೩

ಅಭಿಷೇಕವಾದ ಮೇಲೆ, ಚತುರ್ಮುಖವಾಸದ ಅಭವನಿಗೆ ಕೈಗಳನ್ನು ಮುಗಿದು, ಚಕ್ರವರ್ತಿಯು ಅಭಿಮತಸಿದ್ಧಿಯ ಅಧ್ಯಯನ ಮಂಟಪಕ್ಕೆ ಅಭಿಗಮಿಸಿದನು.

ಮಧ್ಯದ ಪ್ರಾಕಾರದಲ್ಲಿ ಒಂದು ಅಧ್ಯಯನದ ದೀರ್ಘಶಾಲೆ, ನೃಪನಿಗೆ ತಕ್ಕದ್ದು. ಅಧ್ಯಾತ್ಮಸೂರ್ಯನು ಅಲ್ಲಿಗೆ ಬಂದನು, ಸಿಂಹಮಧ್ಯೆಯರು ಅವನ ಬೆನ್ನ ಹಿಂದೆ ಬಂದರು ಚಾಮರದಂತೆ ಕುಚ್ಚುಕುಚ್ಚಾದ ದರ್ಭೆಯ ಹೂವನ್ನು ಅಲ್ಲಿ ಮೊಳದುದ್ದವಾಗಿ ಹರಹಿ, ಅದರ ಮೇಲೆ ಪಟ್ಟೆಯನ್ನು ಹಾಸಿ, ಮಂಟಪ ತುಂಬಿತ್ತು. ನಟ್ಟನಡುವೆ ಚಿನ್ನದ ಕಾಲುಮಣೆಯ ಮೇಲೆ ದರ್ಭೆಯ ಹೂವನ್ನು ದಟ್ಟವಾಗಿ ಇಟ್ಟು, ಪಟ್ಟೆಯನ್ನು ಹಾಸಿದ್ದರು. ದರ್ಭೆಯ ಹೂವಿನಿಂದಲೇ ಆದ ಒರಗುದಿಂಬು ಇಂಬಾಗಿತ್ತು. ಆ ರಾಜಯೋಗಿ ಲಘುವಾದ ವೇಗದಿಂದ ಬಂದು, ಆ ಮಣೆಯ ಮೇಲೆ ಶಾಂತನಾಗಿ ಕುಳಿತನು. ಯೋಗಿ ಸಾಧಿಸಿದ ವಿದ್ಯಾವಳಿಯಂತೆ ಆ ಹೆಣ್ಣುಗಳು ಆ ಮನೆಯ ತುಂಬ ಕುಳಿತರು.

ಆಗ ಅಲ್ಲಿ ಪರಿಮಳವನ್ನು ಸೂಸುವ ಪನ್ನೀರಿನ ಚಿಮುಕಿಲ್ಲ, ಬೀಸುವ ಚಾಮರವಿಲ್ಲ, ಬೀಸಣಿಗೆಯ ಗಾಳಿಯಿಲ್ಲ, ವೀಳೆಯವಿಲ್ಲ. ಕಾಮತಂತ್ರದ ನುಡಿಯಿಲ್ಲ, ಭೋಗದ ಒಂದು ಹೆಸರಿನ ಸ್ಮರಣೆ ಕೂಡ ಇಲ್ಲ, ಕ್ಷೇಮ ಭಾವನೆಯಿಂದ ಮನತುಂಬಿ ಆ ಮೋಕ್ಷಗಾಮಿಗಳು ಅರ್ತಿಯಿಂದ ಇದ್ದರು. ನುಡಿದರೆ, ಒಂದು ಧರ್ಮದ ಮಾತು; ನೋಡಿದರೆ, ಸೊಕ್ಕಡಗಿದ ಶಾಂತಿಯ ನೋಟ; ಒಮ್ಮೊಮ್ಮೆ ನಕ್ಕರೆ, ಧರ್ಮ ಸೋಕಿದ ನಗೆ. ಆಗ ಅಲ್ಲಿ ಸ್ತ್ರೀ

ಪುರುಷರು ಒಬ್ಬರು ಒಬ್ಬರ ಮೈಯನ್ನು ಮುಟ್ಟರು; ಒಮ್ಮೆ ಏನಾದರೂ ಆಪದಾಪತ್ಪರಿಹಾರಕ್ಕಾಗಿ ಮುಟ್ಟಿದರೆ, ತಾಪಸನೊಬ್ಬನ ಮೈಯನ್ನು ಮರ್ದನ ಮಾಡುವ ತಾಪಸರಂತೆ ಮನಸ್ಸಿಗೆ ಏನೂ ವಿಕಾರವಿಲ್ಲದೆ ಇರುತ್ತಿದ್ದರು. ಜಿನಜಿನ! ಅವರ ಅನುದಿನದ ಸುಖವೆಲ್ಲಿ? ಈಗ ಮುನಿಗಳಂತೆ ಈ ಉಪವಾಸವೆಲ್ಲಿ! ಅನುಭವಿಸುವ ಆ ಗಂಡಹೆಂಡಿರು ಒಂದಾಗಿದ್ದರೂ, ಮನಸ್ಸು ಚಂಚಲವಾಗದ ಈ ನಡೆಯೆಲ್ಲಿ!

ಲೋಕದಲ್ಲಿ ಸ್ತ್ರೀಯರು ಪುರುಷರು ಒಬ್ಬರನ್ನು ಒಬ್ಬರು ಅಗಲಿ, ಬ್ರಹ್ಮಚಾರಿತನವನ್ನು ತೋರಬಹುದು. ಆದರೆ, ಸೇರಿದ್ದು ಕೂಡ ಮನಸ್ಸನ್ನು ತಡೆಯುವುದು—ಇದೇ ' ಅಸಿಧಾರಾವ್ರತ 'ವೆಂಬ ಖಡ್ಗದ ಧಾರೆಯ ನಡೆ.

ಮೊದಲು ವ್ರತವನ್ನು ಕೊಂಡು, ಮತ್ತೆ ನಲ್ಲನನ್ನು ಕಂಡು ಮುದ ಗೊಂಡು, ಲೋಕದ ಜನಗಳ ಬೆದರಿಕೆಗಾಗಿ ಸೈರಿಸಿದರೆ — ಅದು ದೊರೆಗಳ ಕುದುರೆಯ ಬ್ರಹ್ಮಚರ್ಯ. ತುಂಬಿದ ಎಲ್ಲರ ಮುಂದೆ ವ್ರತವೆಂದುಕೊಂಡು, ಮತ್ತೆ ಅಂಬುಜಮುಖಿಯರನ್ನು ಕಂಡು ಕುಂಬಳಕಾಯಂತೆ ಮನಸ್ಸಿನ ಒಳಗೇ ಕೊಳೆಯುತ್ತ ಡಂಬಕರಿರುತ್ತಾರಲ್ಲ — ಅದು ವ್ರತವೇ? ವ್ರತವನ್ನು ಹಿಡಿದರೆ ಹಿಡಿಯಬೇಕು — ಸರ್ಪವನ್ನು ಹಿಡಿಯುವಂತೆ, ಕಡುದೃಢವಾಗಿ; ಹಿಡಿದ ಮೇಲೆ ಕೆಟ್ಟಮನಸ್ಸಾದರೆ — ವ್ರತ ತಾನೆ ಹಾವಿನಂತೆ ಲಘುವಾಗಿ ಹಿಡಿದವನನ್ನು ಕಡಿಯುವುದು. ವ್ರತವನ್ನು ತೊಟ್ಟಾಗ, ತೊಟ್ಟಿರಬೇಕು — ಅದರಲ್ಲಿ ಭೇದ ಹುಟ್ಟದಂತೆ, ಏಕವಾದಂತೆ; ಬಿಟ್ಟಾಗ, ಬಿಡಬೇಕು — ಬಿಟ್ಟ ಒಡನೆಯ ಗಾಳಿ ಕೂಡ ಅಂತರಂಗಕ್ಕೆ ತಟ್ಟದಂತೆ. ಬಿಟ್ಟಮೇಲೆ, ಒಮ್ಮೆ ಬಂದು ಅಪ್ಪಿಕೊಂಡರೂ ಜುಂಮು ತಟ್ಟದಿರುವುದು — ಅದು ಬ್ರಹ್ಮಚರ್ಯ; ಕಟ್ಟೆದಿರಲ್ಲಿ ಹೆಣ್ಣುಗಳನ್ನು ಕಂಡು, ಕುದಿದರೆ — ಅದು ಬಿಟ್ಟಿಯ ಬ್ರಹ್ಮಚರ್ಯ.

ಒಮ್ಮೆ ನುಡಿದರೇನು? ಒಮ್ಮೆ ನೋಡಿದರೇನು? ಒಮ್ಮೆ ನಕ್ಕರೇನು? ಒಮ್ಮೆ ಮುಟ್ಟಿದರೇನು? ಚಂಚಲವಾಗದಂತೆ ಮನಸ್ಸನ್ನು ತಡೆದು, ಅಭಿಲಾಷೆ ಅಡಗಿದ ಭಾವಶುದ್ಧರಿಗೆ ಅವರಿಂದೇನು? ನೀರು ಸೋಕಿದರೆ ಬಾಳೆಲೆಗಳು ನನೆವಂತೆ ತಾವರೆಯೆಲೆ ನೆನೆಯುವುದೆ? ಊರಿನ ಸಾಮಾನ್ಯರ ಎದೆ ಹೆಣ್ಣಿನ ಸೋಂಕಿಂದ ನೆನೆವುದಲ್ಲದೆ, ಧೀರರ ಚಿತ್ತ ಅದಕ್ಕೆ ಚಲಿಸದು. ಆ ರಾಜನೂ

ಅವನ ಸ್ತ್ರೀಯರೂ ಎಲ್ಲರೂ ವ್ರತಶೂರರು, ಚಿತ್ತಸಿರ್ಜಿತರು; ಘೋರ ವ್ರತವನ್ನು ಕೈಕೊಂಡು, ಮನಸ್ಸು ಸಡಿಲವೆ, ಆ ಧರ್ಮವೀರರು ಜನಸಗೆ ಮೆಚ್ಚಿಕೆಯಾಗುವಂತೆ ಇದ್ದರು. ಎಷ್ಟೇ ಜೇಸಗೆಯ ಬಿಸಿಲು ಆದರೂ, ತಾವರೆ ಕೊರಗದೆ ನಿರ್ಮಲವಾದ ನೀರಿನಲ್ಲಿ ನಳನಳಿಸುವಂತೆ ಆ ರಾಜನ ರಾಣಿಯರು ಉಪವಾಸವನ್ನು ಕೈಕೊಂಡಿದ್ದರೂ ಧರ್ಮಕಥಾರಸವನ್ನು ಪಾನ ಮಾಡುತ್ತ ಕೊರಗಿಲ್ಲದೆ ಕಂಗೊಳಿಸಿದರು.

ಕಾಲುಮಣೆಯ ಮೇಲಿನ ವರ್ಭಾಸನದಲ್ಲಿ ಚಕ್ರವರ್ತಿಯು ಮಂಡಿಸಿ, 'ಈ ಸತಿಯರು ನನ್ನ ಹೆಂಡಿರು' ಎಂದು ಎಣಿಸವೆ, 'ಇವರು ಇಂದು ಇಲ್ಲಿಗೆ ಬಂದಿರುವ ತಪಸ್ವಿ ಹೆಣ್ಣುಗಳ ತಂಡ' ಎಂದು ಭಾವಿಸುವನು. ಅರಸಿಯರು ಕೂಡ 'ಈ ದೊರೆ ನಮ್ಮ ಗಂಡ' ಎಂದು ಎಣಿಸವೆ, 'ಈತನು ಮಂಡಲಾಚಾರ್ಯನಾದ ತಪೋಧನನೇ ಸರಿ' ಎಂದು ಮೆಚ್ಚಿ ಅವನನ್ನು ನೋಡುವರು, ಅವನನ್ನು ಕುರಿತು ನುಡಿಯುವರು.

೪

ಜ್ಞಾನಭಾಸ್ಕರನಾದ ಆ ರಾಯನು ಧರ್ಮಕಥೆಗೆ ತೊಡಗಬೇಕೆಂದು ಉದ್ದೇಶಿಸಿ, "ಏನಿರೌ ವ್ರತಸತಿಯರಿರಾ, ನಮ್ಮ ಜೊತೆ ಸೇರಿದ್ದರಿಂದ ನಿಮಗೂ ಈ ಉಪವಾಸದ ಗ್ಲಾನಿಯಾಯಿತಲ್ಲವೆ?" ಎಂದನು.

ಅವಕ್ಕೆ ಆ ಸತಿಯರು ಹೇಳಿದರು :

"ಉಪವಾಸದಿಂದ ನಮಗೆ ಏನೂ ಗ್ಲಾನಿಯಾದುದಿಲ್ಲ. ನಿನ್ನ ಉಪದೇಶವನ್ನು ಕೇಳುವಾಗ, ಅದೇ ನಮಗೆ ಉಪರಿಮಸ್ವರ್ಗ! ಹೊಟ್ಟೆ ಹೊರೆಯುವುದರಲ್ಲೇ ನಮಗೆ ಬಹುಜನ್ಮ ಹೋಯಿತು. ಈಗ, ವಿಶುದ್ಧ ಚರಿತನಾದ ನಿನ್ನೊಂದು ಸಂಸರ್ಗದಿಂದ ಆತ್ಮಪೋಷಣೆಗಾಗಿ ನಮಗೆ ಇದು ದೊರೆಕೊಂಡಿತು. ಒಳಗನ್ನು ಅರಿಯದೆ, ಇಷ್ಟು ದಿನವೂ ಹೊರಗನ್ನೇ ಮೆಚ್ಚಿ, ಅನೇಕ ಜಾತಿಗಳಲ್ಲಿ ಜನ್ಮವೆತ್ತಿ ತೊಳಲಿದೆವು. ಈಗ ಹೇ ರಾಜಯೋಗಿ, ನಿನ್ನ ಸಂಗದಿಂದ ನಮಗೆ ಸನ್ಮಾರ್ಗ ಲಭಿಸಿತು. ಮಕ್ಕಳನ್ನು ಪಡೆಯಬೇಕು, ಉಡಬೇಕು, ತೊಡಬೇಕು, ಎಂಬ ವ್ಯಾಕುಲತೆಗಳಿದ್ದ ನಮಗೆ ಆ ವ್ಯಾಕುಲವನ್ನು ಬಿಡಿಸಿದೆ; ಮೋಕ್ಷರಸಿಕನಾದ ನೀನು ನಮಗೆ

ನಿತ್ಯಸುಖದ ಒಂದು ದಿಕ್ಕನ್ನು ತೋರಿಸಿದೆ. ಉಪವಾಸವೇನು ಮಹಾ ಪ್ರಯಾಸವೆ? ಅದು ಹಾಗಿರಲಿ. ಈಗ ಪಾವನವಾದ ಧರ್ಮಸಾರವನ್ನು ಹೊಂದಿಸು, ಹೇ ಪರ್ವದಿನದ ಆಚಾರ್ಯ!"

ಹೀಗೆಂಬುದಾಗಿ ಹೇಳಿ, ಆ ಸತಿಯರು ವಿನಯಾವತಿ, ವಿದ್ಯಾಮಣಿ ಎಂಬ ವನಿತೆಯರನ್ನು ಮುಂದೆ ಮಾಡಿ, ಘನಭಕ್ತಿಯಿಂದ ಕೇಳುತ್ತಿದ್ದರು.

ರಾಜನು "ವಿದ್ಯಾಮಣಿ, ಕೇಳು. ವೀತರಾಗನ ಮತದ ಆದ್ಯಂತವನ್ನು ಕಿರಿದರಲ್ಲಿ ಹೃದ್ಯವಾಗುವಂತೆ ಹೇಳುತ್ತೇನೆ" ಎಂದು ಆಕಾಶದ ನಟ್ಟನಡು ವಿರುವ ಮೂರು ಗಾಳಿಗಳನ್ನೂ ಅದರಲ್ಲಿ ಅಡಗಿರುವ ಮೂರುಲೋಕಗಳನ್ನೂ ವರ್ಣಿಸಿ, "ಹೀಗೆ ನರರಾಗಿದ್ದವರು ಸುರರಾಗಿ, ಸುರರಾಗಿದ್ದವರು ಮತ್ತೆ ನರರಾಗಿ, ಒಮ್ಮೊಮ್ಮೆ ನರಕದಲ್ಲಿ ಹುಟ್ಟಿ, ಆನೆಯಾಗಿ, ಹಸುವಾಗಿ, ಹಾವಾಗಿ, ಮರವಾಗಿ, ಕರ್ಮಕ್ಕೆ ತಕ್ಕಂತೆ ಜನ್ಮ ತಾಳುತ್ತಾರೆ. ಒಮ್ಮೆ ದರಿದ್ರನಾಗಿ, ಒಮ್ಮೆ ಧನಿಕನಾಗಿ, ಒಮ್ಮೆ ಸ್ತ್ರೀಯಾಗಿ, ಒಮ್ಮೆ ಪುರುಷನಾಗಿ ಜೀವಗಳು ಸಂಸಾರದಲ್ಲಿ ತೊಳಲುತ್ತವೆ" ಎಂದನು.

"ಸಿದ್ಧರಂತೆ ಎಲ್ಲರೂ ಸುಖವಾಗಿರುವುದಕ್ಕೆ ತಕ್ಕ ಬುದ್ಧಿ ಯಾವುದು, ಸ್ವಾಮಿ? ಅದನ್ನು ನಮಗೆ ಕಲಿಸು" ಎಂದು ವಿದ್ಯಾಮಣಿ ಶುದ್ಧಚಿತ್ತದಿಂದ ಕೇಳಿದಳು.

"ಕರ್ಮವನ್ನು ಕೆಡಿಸಿದವರೆಲ್ಲರೂ ಸಿದ್ಧರಂತೆ ಆಗುವರು" ಎಂದ, ದೊರೆ.

"ಹಾಗಾದರೆ, ಕರ್ಮವನ್ನು ಕೆಡಿಸುವ ಉಪಾಯ ಅದಾವುದು? ಆ ರಹಸ್ಯವನ್ನು ನಮಗೆ ತಿಳಿಸು" ಎಂದಳು, ವಿದ್ಯಾಮಣಿ.

ಅದಕ್ಕೆ ಅರಸನು "ಜಿನಸಿದ್ಧಭಕ್ತಿಯಿಂದ ಕರ್ಮ ಕೆಡುತ್ತದೆ. ಇದರಲ್ಲಿ ಭೇದಭಕ್ತಿ. ಅಭೇದಭಕ್ತಿ ಎಂದು ಎರಡು ತೆರ. ಜಿನಸಿದ್ಧರುಗಳನ್ನು ಎದುರಿಗಿಟ್ಟು ನೋಡುವುದೂ ಹೊಗಳುವುದೂ ಭೇದಭಕ್ತಿ; ತನ್ನ ಆತ್ಮ ರೂಪಿನಲ್ಲಿಟ್ಟು ನೋಡುವುದು ಭೇದವಿಲ್ಲದ ಭಕ್ತಿ. ಪ್ರಾರಂಭದಲ್ಲಿ ಯಾರು ಭೇದಭಕ್ತಿಯನ್ನು ಮಾಡಿ ಅನಂತರ ನಿರ್ಭೇದಭಕ್ತಿಯಿಂದ ಆರಾಧಿ ಸುವರೋ ಅವರ ಕರ್ಮ ಕೆಡುವುದು" ಎಂದು ವಿಸ್ತಾರವಾಗಿ ವಿವರಿಸಿದನು.

ವಿದ್ಯಾಮಣಿ ಆ ವಾಕ್ಯವನ್ನು ಕೇಳಿ ಒಡಂಬಟ್ಟು ಸುಮ್ಮನಾದ ಮೇಲೆ, ವಿನಯಾವತಿ ಕೈಮುಗಿದು ಕೇಳಿದಳು : " ದೇವತೆಗಳು ಯಾತರಿಂದ ಆಗುವರು ? ಮನುಷ್ಯರು ಯಾವ ಭಾವದಿಂದ ಇರುವರು ? "

ಅದಕ್ಕೆ ರಾಜ ಹೇಳಿದ: " ಪುಣ್ಯದಿಂದ ದೇವತೆಗಳಾಗುವರು. ಪಾಪದಿಂದ ಪಶುಗಳಾಗುವರು, ನರಕದಲ್ಲಿ ಹುಟ್ಟುವರು. ಪುಣ್ಯಪಾಪದ ಮಿಶ್ರವಾದರೆ ನರಜನ್ಮ."

" ಆ ಪುಣ್ಯ ಏತರಿಂದಾಗುವುದು ? ಜೀವನಿಗೆ ಪಾಪ ಏತರಿಂದಾಗು ವುದು ? ಅದರ ರೀತಿಯನ್ನು ತೆರೆದು ತಿಳಿಸು, ಅರಸೆ."

" ದಾನಪೂಜೆಗಳಿಂದ ವ್ರತಜಪಶಾಸ್ತ್ರಚಿಂತನೆಯಿಂದ ಪುಣ್ಯ. ಮಾನ ಮಾಯಾ ಲೋಭ ಕೋಪ ಭೋಗಾಸಕ್ತಿ—ಇವುಗಳಿಂದ ಪಾಪ. ಕುಲಕ್ಕೆ ಜಾತಿಗೆ ಯೋಗ್ಯವಾದ ನಡತೆ, ಜೀವದಯೆ, ತೀರ್ಥಯಾತ್ರೆ — ಇವುಗಳಿಂದ ಪುಣ್ಯ. ಕೊಲೆ ಹುಸಿ ಕಳವು ಹಾದರದ ಆಸೆ— ಇವುಗಳಿಂದ ಪಾಪ. ಈ ಪಾಪಪುಣ್ಯಗಳಿಗೆ ಸೋಕಿದ ಜೀವ ಸಂಸಾರದಲ್ಲಿ ಸುತ್ತುತ್ತದೆ. ಪಾಪ ಪುಣ್ಯಗಳನ್ನು ಸರಿಗಂಡು, ತನ್ನಲ್ಲಿ ತಾನು ನಿಂತರೆ, ಅಂತವರು ಮುಕ್ತಿಗೆ ಹಾರುವರು. "

ಅದಕ್ಕೆ ಆ ಚದುರೆ ಕೇಳಿದಳು : " ಸ್ವರ್ಗಸುಖವನ್ನು ಉಂಟು ಮಾಡುವ ಪುಣ್ಯಕ್ಕೂ ದುರ್ಗತಿಗೆ ಒಯ್ಯುವ ಪಾಪಕ್ಕೂ ಒಂದೇ ಸಮನಾದ ಭಾವನೆಯನ್ನು ಬೆಳಿಸುವ ರೀತಿ ಯಾವುದು, ದೇವ ? "

ಅದಕ್ಕೆ ಅರಸ ಹೇಳಿದ : " ಸ್ವರ್ಗದ ಸುಖ ನಿತ್ಯವಲ್ಲ. ನರಕದ ದುಃಖ ನಿತ್ಯವಲ್ಲ. ಇದು ಕನಸನ್ನು ಕಾಣುವಂತೆ, ಕನಸನ್ನು ಮರೆಯುವಂತೆ, ಬರಿಯ ಜೀವನ ಭ್ರಾಂತಿ. ಕೆಸರನ್ನು ಲೇಪಿಸಿದರೂ ಸರಿಯೆ, ಚಂದನವನ್ನು ಲೇಪಿಸಿದರೂ ಸರಿಯೆ, ಕನ್ನಡಿ ಹೇಗೆ ಕುರುಡಾಗುವುದೋ ಹಾಗೆ ಪಾಪ ವಾಗಲಿ, ಪುಣ್ಯವಾಗಲಿ, ಆತ್ಮನ ಗುಣಗಳಿಗೆ ಮಸಕುಹಿಡಿಸಿಬಿಡುತ್ತದೆ. ಆದ್ದರಿಂದ ಪಾಪವಾಸನೆಯನ್ನು ಪುಣ್ಯವಾಸನೆಯಿಂದ ಲೋಪಿಸಬೇಕು. ಮತ್ತೆ, ಆ ಪುಣ್ಯವನ್ನೂ ತೊಳೆಯದಿದ್ದರೆ ಆ ಆತ್ಮ ಮುಕ್ತವಾಗುವುದಿಲ್ಲ, ಮೂರು ಲೋಕಗಳಿಗೆ ದೀಪವಾಗುವುದಿಲ್ಲ. ಆದ್ದರಿಂದ ಪುಣ್ಯಪಾಪಗಳನ್ನು

ಸರಿಗಾಣು ಎಂದೆ. ಪಾಪ ಕಟ್ಟಿಗೆಯ ಹೊರೆಯಾದರೆ, ಪುಣ್ಯವೆಂಬುದು ಶ್ರೀಗಂಧದ ಹೊರೆ, ಅಷ್ಟೆ.''

ವಿನಯಾವತಿ ಅದಕ್ಕೆ ಒಡಂಬಟ್ಟು ಸುಮ್ಮನಾಗಲು, ಚಂದ್ರಿಕಾದೇವಿ ಎಂಬವಳು ರಾಣಿಯರ ಅನುಮತದಿಂದ ಹೀಗೆ ಪ್ರಶ್ನಿಸಿದಳು :

" ತಾವೇನೋ ಪುಣ್ಯಪಾಪಗಳನ್ನು ಸರಿಗಾಣಬೇಕೆಂದು ಬೋಧಿಸಿದಿರಿ. ಆದರೆ ತಾವು ಈಗ ಪುಣ್ಯಕರ್ಮವನ್ನು ಮಾಡುವುದು ಏಕೆ? ಈ ಜಿನಪೂಜೆ ಮುನಿಭುಕ್ತಿ ಶಾಸ್ತ್ರಚಿಂತನೆ ಸಾಧುಜನರಕ್ಷೆ ದುರ್ಜನಶಿಕ್ಷೆ ಅನಶನ—ಇವೆಲ್ಲ ಪುಣ್ಯಕರ್ಮದ ವರ್ತನೆಯಲ್ಲವೆ ? ''

ರಾಜ ಮೆಚ್ಚಿದ : '' ಚೆನ್ನಾಗಿ ಒಡೆದು ಕೇಳಿದೆ, ವ್ರತಧಾರಿಣಿ. ನಿನ್ನ ಅನುಮಾನ ಸರಿ. ಹೌದು, ನಾನು ಗೃಹಸ್ಥನಾದ್ದರಿಂದ ನನಗೆ ಪುಣ್ಯ ವರ್ತನೆಯುಂಟು. ಗೃಹಸ್ಥಧರ್ಮವನ್ನು ಮೀರಬಾರದು. ದೀಕ್ಷೆ ಪಡೆದ ಮೇಲೆ ಕರ್ಮವನ್ನು ಬಿಡತಕ್ಕದ್ದಲ್ಲ. ಅದರಲ್ಲೂ ರಾಜನಾಗಿರುವನಂತೂ ಬಿಡುವುದು ತಕ್ಕದ್ದಲ್ಲ. ನಾನು ಆತ್ಮಯೋಗವನ್ನು ಕಂಡು ಪುಣ್ಯಕರ್ಮ ವನ್ನು ಬಿಟ್ಟರೆ, ಲೋಕ ತಾನೂ ಪುಣ್ಯಕರ್ಮಗಳನ್ನು ಬಿಟ್ಟುಬಿಡುವುದು.''

''ಹಾಗಾದರೆ, ಪರಹಿತಕ್ಕಾಗಿ ಬಳಲುವೆನೆಂಬಾಗ ಕರ್ಮನಾಶವಾಗುವು ದೆಲ್ಲಿ ? ಅದರಿಂದ ಕರ್ಮಬಂಧವಾಗುವುದಿಲ್ಲವೆ ? ನಮಗೆ ಇದನ್ನು ಚೆನ್ನಾಗಿ ನಿರೂಪಿಸಬೇಕು.''

''ಮನಸ್ಸನ್ನು ಹಂಸನಾಥನಲ್ಲಿಟ್ಟು, ಹೊರಗೆ ಉದಾಸೀನದಿಂದ ಉಳಿದ ಕರ್ಮಗಳನ್ನು ಜ್ಞಾನಿ ಮಾಡುವನು. ಅದರಿಂದ ಅವನಿಗೆ ಕರ್ಮ ಮಾಡಿದರೂ ಕರ್ಮಬಂಧವಿಲ್ಲ. ಅದು ಅವನ ಧ್ಯಾನದ ಶಕ್ತಿ. ಆತ್ಮವಿಜ್ಞಾನಿ ರಾಗರಹಿತನಾದುದರಿಂದ ಅವನು ಭೋಗಿಸಿದರೂ ಅವನಿಗೆ ಬಂಧವಿಲ್ಲ. ಅವನು ಗೃಹಸ್ಥಧರ್ಮದಲ್ಲಿದ್ದರೂ ಸಂನ್ಯಾಸಧರ್ಮದಲ್ಲಿದ್ದಂತೆಯೇ ಸರಿ.''

'' ಹಾಗಾದರೆ, ತಮಗೆ ಈ ಉಪವಾಸ ಮೊದಲಾದ ವ್ಯಥೆ ಏಕೆ ? ಎಂದಿನ ಹಾಗೆ ಭೋಗಗಳನ್ನು ಅನುಭವಿಸುತ್ತ ಇರಬಾರದೆ ? ''

'' ಅಲ್ಲವೇ ! ಭೋಗದಲ್ಲಿ ಆಸಕ್ತಿ ಸಲ್ಲದೆಂದು ನಾನು ಹೇಳಿದ್ದನ್ನು ಮರೆತೆಯೇನು ? ಭೋಗದಲ್ಲಿ ತಲ್ಲೀನನಾಗಬಾರದು ಎಂದೇ ಇಲ್ಲಿ ಇಷ್ಟು ಅದನ್ನು ತೊರೆಯುವುದು.''

"ಈ ನಡತೆ ತಮಗೇನೋ ಸಲ್ಲುವುದು. ಆ ತರದ ಆತ್ಮಭಾವನೆ ನಮಗೆ ಬಾರದು. ನಮಗೆ ಮತ್ತೇನು ಗತಿ?" ಎಂದು ಚಂದ್ರಿಕಾದೇವಿ ಭಕ್ತಿಯಿಂದ ಕೇಳಿದಳು.

ದೊರೆ ಹೇಳಿದ: "ಎಲ್ಲರಿಗೂ ಬಾರದು ಎನ್ನಬೇಡ. ಕೆಲವರ ಎದೆಯಲ್ಲಿ ಆತ್ಮಯೋಗ ಹೊಳೆಯುತ್ತದೆ. ಬಲ್ಲವರು ಆತ್ಮಯೋಗವನ್ನು ನಡೆಸಿರಿ. ಆಗದಿದ್ದವರು ನಡೆಸಿದವರನ್ನು ಕಂಡು ಮೆಚ್ಚಿರಿ! ಪರಮಾತ್ಮ ಯೋಗವೇ ಮುಕ್ತಿಗೆ ಬೀಜ ಎಂದು ಎರಡಿಲ್ಲದೆ ಎದೆಯಲ್ಲಿ ನಂಬಿ, ಪುಣ್ಯ ಕೃತ್ಯವನ್ನು ಆಚರಿಸಿರಿ. ಅದು, ಇಂದಿಲ್ಲದಿದ್ದರೆ ನಾಳೆಯಾದರೂ ಮುಕ್ತಿಗೆ ಮಾರ್ಗ ತೋರಿಸುವುದು."

ಹೀಗೆಯೇ ರಾಜನು ಜೈನ ಸಿದ್ಧಾಂತವನ್ನು ಕುರಿತು ಆ ನಾರಿಯರು ಕೇಳಿದುದಕ್ಕೆಲ್ಲಾ ಸೂಕ್ತವಾದ ಉತ್ತರ ಹೇಳಿದನು. ಎಲ್ಲರೂ ಕೈವಲ್ಯ ವನ್ನು ಪಡೆದವರಂತೆ ಸಂತೋಷದಲ್ಲಿ ಮುಳುಗಿದರು.

"ಯಾವ ಜನ್ಮದಲ್ಲಿಯೂ ಪಡೆಯದ ಸಮ್ಯಕ್ತ್ವವನ್ನು, ದೇವ, ನಿನ್ನಿಂದ ಈ ಜನ್ಮದಲ್ಲಿ ಪಡೆದೆವು. ಮುಕ್ತಿ ಪಡೆಯುವುದು ನಮಗೇನೂ ದೊಡ್ಡದಲ್ಲ ನಿನ್ನ ಸಹವಾಸದಿಂದ ನಾವು ಕೃತಕೃತ್ಯೆಯರಾದೆವು" ಎಂದು ಆ ಪತಿಭಕ್ತೆಯರು ಸಾಷ್ಟಾಂಗವೆರಗಿ, ಭೂಪತಿಯು ಏಳಿರೆಂದು ಹೇಳಿದ ಮೇಲೆ ಎದ್ದರು.

ಅಷ್ಟು ಹೊತ್ತಿಗೆ ಸೂರ್ಯನು ಅಸ್ತಗಿರಿಗೆ ಸೇರಿದನು. ಆಗ ದೇವ ಸ್ತೋತ್ರದ ಕಾಲವಾಯಿತೆಂದು ಆ ರಾಣಿಯರು ಆ ವಿಸ್ತೀರ್ಣ ಗೃಹದಿಂದ ಎದ್ದು ಜಿನಭವನಕ್ಕೆ ಹೋದರು

ಆ ಶೀಲವತಿಯರು ಅತ್ತ ಜಿನಾಲಯಕ್ಕೆ ಹೋದರು. ಇತ್ತ ದೊರೆಯು ಆ ಅಧ್ಯಯನಶಾಲೆಯಲ್ಲಿ ತಾನೊಬ್ಬನೇ ಇದ್ದನು.

ಈ ಪ್ರಕಾರವಾಗಿ ಭರತ ಚಕ್ರವರ್ತಿಯ ಯೋಗ - ಭೋಗ - ಜೀವನ ದಲ್ಲಿ ಎರಡು ದಿನ ಕಳೆಯಿತು.

---

ಓಂಕಾರ್ ಪವರ್ ಪ್ರೆಸ್, ಅರಳೇಪೇಟೆ, ಬೆಂಗಳೂರು.



ಶ್ರೀ ಜಿ. ಪಿ. ರಾಜರತ್ನಂ.

ಹುಟ್ಟಿದ್ದು : ಮೈಸೂರಿನ ಪ್ರಸಿದ್ಧ ಗುಂಡ್ಲುಪಂಡಿತ ವಂಶ. ಶ್ರೀ ರಾಮಾನುಜ ಸಿದ್ಧಾಂತದ ತಾಯಿಯ ಹಾಲು ಕುಡಿದು ಬೆಳೆದದ್ದು. ತಂದೆ—ಮಧ್ಯಮ ಶಾಲೆಯ ಉಪಾಧ್ಯಾಯರು, ಸಾಹಿತ್ಯದ ಮೊದಲ ಸವಿ ಕಾಣಿಸಿದವರು. ವಿದ್ಯೆ : ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ-ಬಿ. ಎ., ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಎಮ್. ಎ., ನೀತಿ, ನಡತೆ : ನಾಡಿನ ಹಿರಿಯರ ಹರಕೆಯಿಂದ ಹೊಂದಿದ್ದು.

ಜೀವ— ಕನ್ನಡಕ್ಕೆ ಮದುವೆಯಾದದ್ದು ; ಜೀವನ— ಕನ್ನಡದ ಕರುಣೆಯಿಂದ, ಕನ್ನಡದಲ್ಲಿ, ಕನ್ನಡಕ್ಕಾಗಿ.

ವೃತ್ತಿ : ಬ್ರಾಹ್ಮಣನ ಷಟ್ಕರ್ಮಗಳಲ್ಲಿ ನಡುವಿನ ಎರಡು— ಅಧ್ಯಯನ ಮತ್ತು ಅಧ್ಯಾಪನ. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ 'ಮೇಷ್ಟರು'.

ಸಾಧನೆ, ಸಿದ್ಧಿ : ಮೊದಲು 'ರತ್ನನ ಪದ', 'ಪುರುಷ ಸರಸ್ವತಿ' ಇಂಥ ಸ್ವಂತ ಕೃತಿ ರಚನೆಮಾಡಿದರೂ ; ಬರುತ್ತ ಬರುತ್ತ ಶಿಶುಸಾಹಿತ್ಯ, ಬಾಲಸಾಹಿತ್ಯ, ಹಳಗನ್ನಡ ಕಾವ್ಯಗಳು, ಹೊಸಗನ್ನಡ ಕವಿಗಳು, ಬೌದ್ಧಧರ್ಮ, ಜೈನಧರ್ಮ ಮುಂತಾದುವನ್ನು ಕುರಿತು ಬರೆದು, ಅವುಗಳನ್ನು ಕುರಿತು ಭಾಷಣಮಾಡಿ, ಪ್ರಥಮ ಪಂಕ್ತಿಯ ಪ್ರಚಾರ ಸಾಹಿತಿಯಾಗಿದ್ದಾರೆ.